# ವಿಧವಾ ವಿವಾಹ ಮೀಮಾಂಸೆ

(ಹಿಂದೀಗ್ರಂಥದ ಕನ್ನಡ ಭಾಷಾನುವಾದ)

ಆಸ್ಥಾನ ವ್ಯಾಕರಣ ವಿದ್ವಾನ್

ಎಂ. ಕೆ.

ಶ್ರೀನಿವಾಸರಾಘವಾಚಾರ್ಯರಿಂದ

ಕನ್ನಡಿಸಲ್ಪಟ್ಟು

ಪ್ರಚಾರಪಡಿಸಲ್ಪಟ್ಟಿತು

ಪ್ರಥಮಭಾಗ



1928 ನೇ ನವಂಬರ್

ಬೆಲೆ [illegible]

[illegible]ಚನೂರ್ ಪ್ರ[illegible], ಮೈಸೂರು.

ಧರ್ಮೇಣೈವಜಗತ್ಸುರಕ್ಷಿತಮಿದಂ ಧರ್ಮೋಧರಾಧಾರಕಃ।

ಧರ್ಮಾದ್ವಸ್ತುನಕಿಂಚಿದಸ್ತಿಭುವನೆ ಧರ್ಮಾಯತಸ್ಮೈನಮಃ ॥

ಹಿಂದೂ ಸಂತಾನದಲ್ಲಿ ಯಾರೂ ವಿಧವಾ ವಿವಾಹದ ಮಾತನ್ನೇ ತಿಳಿದವರಾಗಿರಲಿಲ್ಲ. ಮೊತ್ತಮೊದಲು ಈಶ್ವರಚಂದ್ರವಿದ್ಯಾಸಾಗರರು ಎತ್ತಿದರು. ಅವರ ಅನಂತರದಲ್ಲಿ ಕೆಲದಿನಗಳವರೆಗೆ ಹಾಗೆಯೇ ನಿಂತಿದ್ದಿತು. ಈಗ ಪುನಃ ಶಾಸ್ತ್ರವಿಚಾರಾನಭಿಜ್ಞರಾದ, ತಮ್ಮ ಪ್ರಸಿದ್ಧಿಯನ್ನು ಬಯಸುವ ಕೆಲಜನಗಳು ಆರಂಭಿಸಿರುವರು. ಹಿಂದುಗಳ ಸರ್ವಕರ್ಮಗಳೂ ಧರ್ಮಶಾಸ್ತ್ರಕ್ಕೆ ಅನುಸಾರವಾಗಿಯೇ ನಡೆಯುತ್ತಿವೆ. ಹಿಂದೂ ಸಮಾಜವು ಧರ್ಮಶಾಸ್ತ್ರದ ಹಿಂದೆಹಿಂದೆಯೇ ಇರುವದು. ಯುಕ್ತಿಕೃತ ವಿಚಾರವು ಧರ್ಮಶಾಸ್ತ್ರಕ್ಕೆ ವಿರುದ್ಧವಾದ ಪಕ್ಷದಲ್ಲಿ ಯಾರದೇ ಆದಾಗ್ಯೂ ಅದನ್ನು ಹಿಂದೂ ಸಮಾಜವು ಗಣನೆಗೆ ತರುವದಿಲ್ಲ. ಇದನ್ನು ವಿಧವಾ ವಿವಾಹ ಪಕ್ಷದವರು ಚೆನ್ನಾಗಿಯೂ ಬಲ್ಲರು. ಯುಕ್ತಿಯ ಬಲದಿಂದ ವಿಧವಾ ವಿವಾಹವನ್ನು ಸಾಧಿಸುವದು ನಿರರ್ಥಕ ಶ್ರಮವೆಂದು ಅರಿತು ವಿದ್ಯಾಸಾಗರರೇ ಮೊದಲಾದ ವಿಧವಾ ವಿವಾಹ ಪಕ್ಷಪಾತಿಗಳು ಯುಕ್ತಿ ಮಾರ್ಗವನ್ನು ಬಿಟ್ಟು ಯಥಾಶಕ್ತಿ ಶಾಸ್ತ್ರಸಮ್ಮತವೆಂದು ಸಾಧಿಸುವದಕ್ಕೆ ಪ್ರಯತ್ನಿಸಿರುವರು. ಭಾರತವರ್ಷದ ಪಂಡಿತರುಗಳು ಅದನ್ನು ಸಮಯ ಸಮಯದಲ್ಲಿ ಖಂಡಿಸುತ್ತಿರುವರು. ಆದರೆ ಆ ಪುಸ್ತಕಗಳು ಈಗ ದೊರೆಯುವದಿಲ್ಲ. ಅದರ ಮೇಲೆ ವಿಧವಾ ವಿವಾಹ ಪಕ್ಷದವರು ಕೆಲವು ಮನಸ್ವೀ ಪುಸ್ತಕಗಳನ್ನು ಬರೆದು ಸಂಸ್ಕೃತವನ್ನರಿಯದ ಪಾಶ್ಚಾತ್ಯ ಬುದ್ಧಿಯವರನ್ನು ಭ್ರಮದಲ್ಲಿ ತಳ್ಳಿದರು. ವಿಧವಾ ವಿವಾಹದ ವಿಷಯವು ಪ್ರಾರಂಭವಾಗುವದರ ಪೂರ್ವದಲ್ಲಿಯೇ ಅಂದರೆ ಬಹುದಿನಗಳ ಹಿಂದೆಯೇ ಪಾಶ್ಚಾತ್ಯ ವಿದ್ಯೆಯ ಆದರವೂ, ಉನ್ನತಿಯೂ, ಅದರ ಜತೆಜತೆಯಲ್ಲಿಯೇ ಸಂಸ್ಕೃತಕ್ಕೆ ಯುಕ್ತಿಗೆ ಅಶ್ರದ್ಧೆಯೂ, ಹಿಂದೂ ಸಮಾಜದಲ್ಲಿ ಪ್ರಚಲಿತವಾಗಿದ್ದಿತು. ಇದುವೆ. ಹಾಗೆಯೇ

ಜದ ಬಹು ಜನರು ಕೇವಲ ಪಾಶ್ಚಾತ್ಯ ವಿದ್ಯೆಯಲ್ಲಿಯೇ ಪ್ರವೀಣರಾಗಿ ಪಾಶ್ಚಾತ್ಯರರೀತಿ, ಪಾಶ್ಚಾತ್ಯರ ಸಭ್ಯತೆ, ಪಾಶ್ಚಾತ್ಯರ ಧನಪಿಪಾಸೆ, ಅದೇಪ್ರಕಾರವಾದ ವಿಷಯಬುದ್ಧಿ ಇವುಗಳನ್ನು ಸಂಗ್ರಹಮಾಡಿ ಬಿಟ್ಟಿದ್ದರು. ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ಪರಧನದಿಂದ ಪ್ರಾಣಗಳನ್ನೂ, ಮನಸ್ಸನ್ನೂ ಕಲುಷಿತಗಳನ್ನಾಗಿ ಮಾಡುವದಕ್ಕೆ ಮುಖಮುಖ ನೋಡುತ್ತಿದ್ದರು. ಇದಕ್ಕೆ ಯಾವ ಫಲವಾಗಬೇಕೋ ಅದು ಆಗಿಹೋಗಿತ್ತು. ಹಿಂದೂ ಸಮಾಜದಲ್ಲಿ ಅಧಿಕತರ ಜನಗಳು ಸ್ವಧರ್ಮ ದ್ವೇಷಿಗಳಾಗಿದ್ದರು. ಪಾಶ್ಚಾತ್ಯರ ಆಹಾರವೂ, ವ್ಯವಹಾರವೂ, ವೇಷವೂ ಇವರ ಹೃದಯದಲ್ಲಿ ಬೇರೂರಿದ್ದಿತು. ಆದುದರಿಂದ ಮ್ಲೇಚ್ಛರಿಗೆ ಪ್ರಿಯವಾದ ವಿಧವಾ ವಿವಾಹವು ಇವರ ಮನಸ್ಸಿನಲ್ಲಿ ಅತ್ಯಾವಶ್ಯಕ ರೂಪದಿಂದ ಮೊದಲಿನಿಂದಲೂ ಸ್ಥಿರವಾಗಿದ್ದಿತು. ಆದರೂ ಹಿಂದೂ ಸಮಾಜದ ಸಿದ್ಧಾಂತವನ್ನು ಒಂದೇ ತಡವೆ ಸಡಿಲಿಸುವದಕ್ಕೆ ಯಾರೂ ಸಾಹಸವುಳ್ಳವರಾಗಿರಲಿಲ್ಲ. ಬ್ರಾಹ್ಮಣರೆನ್ನಿಸಿಕೊಂಡಿರುವ ಈಶ್ವರಚಂದ್ರವಿದ್ಯಾಸಾಗರರೇ ಮೊದಲಾದ ಒಬ್ಬರಿಬ್ಬರು ವಿಧವಾ ವಿವಾಹವು ಹಿಂದೂ ಶಾಸ್ತ್ರಸಮ್ಮತವೆಂಬ ಹೆಸರನ್ನೆತ್ತಿದ ಒಡನೆಯೇ ಪಾಶ್ಚಾತ್ಯ ವಿದ್ಯೆಯಿಂದ ವಿಭೂಷಿತರಾದ ಆಧುನಿಕ ಸುಶಿಕ್ಷಿತರ ಮನಸ್ಸು ಉಬ್ಬಿತು. ವಿಧವಾ ವಿವಾಹವು ಶಾಸ್ತ್ರಾನುಕೂಲವೆಂದು ತೋರಿಸುವ ವಿದ್ಯಾಸಾಗರರೇ ಮೊದಲಾದವರ ವಿಚಾರವು ಎಷ್ಟರಮಟ್ಟಿಗೆ ಸಾರವೂ, ಸತ್ಯವೂ ಆಗಿರುವದೆಂಬುದನ್ನು ನೋಡುವ ಅವಶ್ಯಕತೆಯೂ ಇವರಿಗೆ ಉಂಟಾಗಲಿಲ್ಲ. ಅಲ್ಲದೆ ಅನೇಕರು ಈ ಅಶಾಸ್ತ್ರೀಯವಾದ ಆಚರಣದಲ್ಲಿಯೇ ಇಳಿದರು. ಇಂತಹ ಜನಗಳಲ್ಲಿ ಸ್ವಧರ್ಮದ್ವೇಷಿಗಳೂ, ಶಾಸ್ತ್ರಾನಭಿಜ್ಞರೂ ವಿದೇಶೀಯವಾದ ಆಚಾರ ವ್ಯವಹಾರಗಳ ಪ್ರೇಮಿಗಳೂ, ವಿದೇಶೀಯ ಭಾಷೆಯಲ್ಲಿ ಶಿಕ್ಷಿತರೂ ಆದವರೇ ಹೆಚ್ಚಾಗಿರುವರು. ಇಂತಹ ಬಹು ಜನಗಳೊಂದಿಗೆ ನಮಗೆ ಸಂಭಾಷಣೆಯು ನಡೆದಿರುವದು. ಅದರಿಂದ ವಿಧವಾ ವಿವಾಹ ಪಕ್ಷದವರ ಪುಸ್ತಕಗಳನ್ನು ಅವರಲ್ಲಿ ಅನೇಕರು ಕಣ್ಣಿನಿಂದ ಸಹ ನೋಡಿಲ್ಲ. ಆದರೂ ಈಶ್ವರಚಂದ್ರವಿದ್ಯಾಸಾಗರರೇ ಮೊದಲಾದವರು ಅನೇಕ ಶಾಸ್ತ್ರೀಯ ಪ್ರಮಾಣಗಳನ್ನು ಕೊಟ್ಟು ವಿಧವಾ ವಿವಾಹಕ್ಕೆ ಶಾಸ್ತ್ರೀಯತೆಯನ್ನು ...ಮಾಡಿರುವರೆಂದು ಮಾತ್ರ ಎಲ್ಲರೂ ಸ್ಥಿರನಿಶ್ಚಯವನ್ನು ಮಾಡಿಕೊಂಡಿರುವರು. ...ಳಿದು ಬಂದಿತು. ಇಷ್ಟೇ ಅಲ್ಲ. ವಿಧವಾ ವಿವಾಹವು ಶಾಸ್ತ್ರಕ್ಕೆ ಪ್ರತಿ...ವ ಪಕ್ಷದಲ್ಲಿ ಅದಕ್ಕಾಗಿ ಹೊಸ ಶಾಸ್ತ್ರವನ್ನೇ ಏರ್ಪಡಿಸಬೇಕೆಂದು ...ತ್ರ ಮಾಡಿದ್ದರು.

ಎಂತಹ ಭಯಂಕರ ಪಕ್ಷಪಾತ!! ಎಂತಹ ತುಚ್ಛದೃಷ್ಟಿ !!! ಈಗಿನ ನವಶಿಕ್ಷಿತರು ವಿಧವಾ ವಿವಾಹವನ್ನು ಪ್ರಚಾರಕ್ಕೆ ತರುವುದಕ್ಕಾಗಿ ಹೊಸ ಶಾಸ್ತ್ರವನ್ನೇ ಕಲ್ಪಿಸಿ ಮನ್ವಾದಿ ಧರ್ಮಶಾಸ್ತ್ರಗಳನ್ನು ತಿರಸ್ಕರಿಸುವದಕ್ಕೆ ಪ್ರವೃತ್ತರಾಗಿರುವರು. ಇಂತಹ ಮಾತುಗಳನ್ನು ಕೇಳಿಕೇಳಿ ನಿಜವಾದ ಹಿಂದುಗಳ ಮನಸ್ಸಿನಲ್ಲಿ "ಇನ್ನು ಭೂಮಿಯು ಭಾರವನ್ನು ಸಹಿಸಲಾರದು. ಈಗ ವಸಿಷ್ಠ, ಪರಾಶರ ವ್ಯಾಸ ಮೊದಲಾದವರ ನಾಮವೂ ಪವಿತ್ರಕರ್ಮವೂ ಜಗತ್ತಿನಲ್ಲಿ ನಿಲ್ಲಲಾರದು." ಎಂದು ಮರುಕ ಹುಟ್ಟಿ ದುಃಖದಿಂದ ವೇದಶಾಸ್ತ್ರಾದಿ ಸಂಗ್ರಹರೂಪವಾದ "ವಿಧವಾ ವಿವಾಹ ಮೀಮಾಂಸಾ" ಎಂಬ ಪುಸ್ತಕದಲ್ಲಿ ಧರ್ಮಜಿಜ್ಞಾಸುಗಳಾದ ಜನಗಳಿಗೆ ಇದುವರೆ ವಿಗೂ ಈಶ್ವರಚಂದ್ರವಿದ್ಯಾಸಾಗರರೇ ಮೊದಲಾದ ವಿಧವಾ ವಿವಾಹ ಪಕ್ಷದವರ ಚಾಕಚಕ್ಯವನ್ನೂ, ಪ್ರಮಾಣಾಭಾಸವನ್ನೂ, ಕುತರ್ಕಗಳನ್ನೂ ತೋರ್ಪಡಿಸಿ, ವಿಧವೆಯರ ಜೀವನಕ್ಕೆ ಅನುಕೂಲವಾದ ಶಾಸ್ತ್ರಾಜ್ಞೆಯನ್ನೂ ಅನೇಕ ಋಷಿಗಳ ಏಕವಾಕ್ಯತೆಯನ್ನೂ ತೋರಿಸುವ ಯತ್ನದಲ್ಲಿ ಮನಸ್ಸನ್ನು ಇಟ್ಟದಾಯಿತು. ನಮ್ಮ ಪೂರ್ವಪುರುಷರಾದ ಮಹರ್ಷಿಗಳಿಗೆ ನಮ್ಮಂತೆ ಸರಿಯಾದ ಯುಕ್ತಿಗಳೇ ತಿಳಿಯದು. ನಮ್ಮಷ್ಟು ಅವರು ಬುದ್ಧಿವಂತರಲ್ಲನೆಂಬ ಅಹಂಕಾರವನ್ನು ಬಿಟ್ಟು ನಮ್ಮ ದೇಶವು ಇದುವರೆಗೆ ಹುಚ್ಚರ ದೇಶವಾಗಿರಲಿಲ್ಲವೆಂಬುದನ್ನೂ ನಮ್ಮ ಪೂರ್ವ ಪುರುಷರು ಏರ್ಪಡಿಸಿರುವ ವಿಧಿನಿಷೇಧಗಳನ್ನು ಕೇಳುವದಕ್ಕೆ ಆಗದೆ ಕಿವಿಯನ್ನು ಮುಚ್ಚಿಕೊಳ್ಳುವಷ್ಟು ನಮ್ಮ ಪೂರ್ವಿಕರು ವಿಕ್ಷಿಪ್ತಚಿತ್ತರಾಗಿರಲಿಲ್ಲವೆಂಬುದನ್ನೂ ಸಹ ನಮ್ಮ ನವಶಿಕ್ಷಿತರು ತಮ್ಮ ಆಧುನಿಕ ಯುಕ್ತಿಗಳ ಪ್ರವಾಹವನ್ನು ಸ್ವಲ್ಪಕಾಲ ತಡೆದುಕೊಂಡು ಸಾವಧಾನಚಿತ್ತದಿಂದ ಶಾಸ್ತ್ರದ ವಿಧಿನಿಷೇಧಗಳನ್ನು ವಿಚಾರಮಾಡಿ ನೋಡಬೇಕೆಂಬದಾಗಿಯೂ ವಿಚಾರಮಾಡಿದ ಮೇಲೆ ವಿಧವಾ ವಿವಾಹ ಪಕ್ಷದ ಸಿದ್ಧಾಂತವು ಅಭ್ರಾಂತವೆಂದು ಸಿದ್ಧವಾಗುವದಾದರೆ ಹಾಗೆಯೇ ಮಾಡಬಹುದು. ಇಲ್ಲವಾದರೆ ಭ್ರಮದಲ್ಲಿ ಬಿದ್ದು ಅಶಾಸ್ತ್ರೀಯ ಸಿದ್ಧಾಂತವನ್ನು ಸ್ವೀಕರಿಸುವದು ವಿಚಾರಕ್ಕೂ ಧರ್ಮಕ್ಕೂ ವಿರುದ್ಧವೆಂಬುವದನ್ನು ಗ್ರಹಿಸಬೇಕೆಂದೂ ವಿಧವಾ ವಿವಾಹ ಪಕ್ಷದವರಲ್ಲಿ ಸವಿನಯ ವಿಜ್ಞಾಪನೆಯು.

ಪ್ರಕೃತದಲ್ಲಿ ಎರಡು ದಳದ ಮನುಷ್ಯರಿರುವರು. ಅವರೊಳಗೆ ಒಂದು ದಳದವರು ಪೂರ್ವ ಋಷಿಗಳ ಉಪದೇಶವನ್ನು ಅತರ್ಕಿತರೂಪದಿಂದ ಗ್ರಹಣ ಮಾಡುವದರಲ್ಲಿ ಆಶೆಯುಳ್ಳವರಾಗಿರುವರು. ಮತ್ತೊಂದು ದಳದವರು ತಮ್ಮ ಯುಕ್ತಿಗೆ ವಿರೋಧವಿಲ್ಲದ ಶಾಸ್ತ್ರಭಾಗವನ್ನು ಮಾತ್ರ ಗ್ರಹಿಸಲಪೇಕ್ಷಿಸುವರು. ಹಾಗೆಯೇ

ಈ ದಳದವರು ತಮ್ಮ ಬುದ್ಧಿಗೆ ವಿರುದ್ಧವಾಗಿ ಶಾಸ್ತ್ರದಲ್ಲಿ ಯಾವುದಾದರೂ ಬರೆದಿರುವದಾದರೆ ಅದನ್ನು ಬಿಟ್ಟು ತಮ್ಮ ಬುದ್ಧಿಗೆ ಅನುಸಾರವಾಗಿ ನಿಯಮವನ್ನು ಸ್ಥಾಪಿಸುವದರಲ್ಲಿ ಉತ್ಸಾಹಶೀಲರಾಗಿರುವರು. ಎಲ್ಲರ ವಿದ್ಯೆಯೂ, ಬುದ್ಧಿಯೂ ಒಂದೇ ಸಮನಾಗಿರುವದಿಲ್ಲ. ಆದುದರಿಂದ ಪ್ರಥಮ ದಳದವರೊಂದಿಗೆ ನಮ್ಮ ಶಾಸ್ತ್ರೀಯ ವಿಚಾರದಲ್ಲಿ. ಮತಭೇದವುಂಟಾದರೂ ಇಬ್ಬರ ಸಿದ್ಧಾಂತವೂ ಒಂದೇ ಆಗುವದು.

ಮತ್ತೊಂದು ದಳದವರಿಗೂ ನಮಗೂ ಮತಭೇದವು ಅವಶ್ಯವಾಗಿಯೂ ಉಂಟು. ಆದುದರಿಂದ ಅವರು ತಮ್ಮ ಅಸದಹಂಕಾರವನ್ನು ತ್ಯಜಿಸಿ ತಮ್ಮ ಪುರಾತನ ಋಷಿಗಳ ತಪೋಬಲಜನ್ಯವಾದ ಪವಿತ್ರತೆಯಲ್ಲಿ ಧ್ಯಾನವಿಟ್ಟು ಈ ಪುಸ್ತಕವನ್ನು ಒಂದಾವರ್ತಿ ಪಕ್ಷಪಾತವಿಲ್ಲದ ದೃಷ್ಟಿಯಿಂದ ಆದ್ಯಂತವಾಗಿ ನೋಡಬೇಕೆಂದು ಅವರನ್ನು ಕೇಳಿಕೊಳ್ಳುವೆವು. ಇದನ್ನು ಬರೆಯುವದರಲ್ಲಿ ಮೈಮನಸಿಂಹದ ಪಂಡಿತ ಪ್ರಸನ್ನ ಕುಮಾರಜಿಯುವರ ಲೇಖನದ ಸಹಾಯವನ್ನು ಪಡೆದಿರುವದರಿಂದ ಅವರು ಪರಮಧನ್ಯವಾದಕ್ಕೆ ಪಾತ್ರರಾಗಿರುವರು, ಎಂದು ಮುರಾದಾಬಾದ್ ನಿವಾಸಿಗಳಾದ ಋಷಿಕುಮಾರ ರಾಮಸ್ವರೂಪಶರ್ಮರವರು ಬರೆದಿರುವರು.

ಎಂ. ಕೆ. ಶ್ರೀನಿವಾಸರಾಘವಾಚಾರ್ಯ,
ಸಂಪಾದಕ, ಸನಾತನಧರ್ಮ ಸಂಜೀವಿನೀ.

# ವಿಧವಾವಿವಾಹ ಮೀಮಾಂಸೆ.

——:o:——

ವಿಧವಾ ವಿವಾಹವು ಶಾಸ್ತ್ರವಿರುದ್ಧವಾದುದು. ಇದನ್ನು ಪ್ರಚಾರಕ್ಕೆ ತರುವದು ಉಚಿತವಲ್ಲವು.

## ಪ್ರಥಮಾಧ್ಯಾಯ

ವಿಧವಾವಿವಾಹದ ವಿಷಯದಲ್ಲಿ ಬಂಗಾಳದ ಪಂ|| ಈಶ್ವರಚಂದ್ರವಿದ್ಯಾಸಾಗರರು ಅಧಿಕವಿಚಾರವನ್ನು ಮಾಡಿದರು. ಅವರು ಶಾಸ್ತ್ರವಚನಗಳನ್ನು ಅಸ್ತವ್ಯಸ್ತಮಾಡುವದರಿಂದಲೂ ತಮ್ಮ ಮನಸ್ಸಿನ ಅಭಿಪ್ರಾಯಕ್ಕೆ ತಕ್ಕಂತೆ ಕೆಲವೆಡೆಗಳಲ್ಲಿ ತಮ್ಮ ಕಡೆಗೆ ಎಳೆದುಕೊಳ್ಳುವದರಿಂದಲೂ ವಿಧವಾ ವಿವಾಹವು ವೇದಶಾಸ್ತ್ರಸಮ್ಮತವೆಂದು ಸಿದ್ಧಪಡಿಸುವದಕ್ಕಾಗಿ ಬಂಗಾಲೀ ಭಾಷೆಯಲ್ಲಿ ಒಂದು ಪುಸ್ತಕವನ್ನು ರಚಿಸಿದರು. ಈಗಿನ ವಿಧವಾವಿವಾಹ ಪಕ್ಷದವರು ಆ ಪುಸ್ತಕದ ಸಹಾಯದಿಂದಲೇ ತಮ್ಮ ವಿಜೃಂಭಣೆಯನ್ನು ತೋರುತ್ತಿರುವರು. ಆದುದರಿಂದ ಆ ವಿದ್ಯಾಸಾಗರ ಮಹಾಶಯರನ್ನಾರಂಭಿಸಿ ಇದುವರೆಗೆ ಜನರು ಧರ್ಮಶಾಸ್ತ್ರದಹೆಸರಿನಿಂದ ಎಷ್ಟು ಅನುಚಿತರೀತಿಯಲ್ಲಿ ಪ್ರವರ್ತಿಸಿರುವರೋ ಅದರ ಅಸಾರತೆಯನ್ನು ತೋರ್ಪಡಿಸುವದರ ಮೂಲಕ ಈ ಪುಸ್ತಕದಲ್ಲಿ ವಿಧವಾವಿವಾಹದ ವಿಷಯದಲ್ಲಿ ವೇದಶಾಸ್ತ್ರಗಳ ಅಭಿಪ್ರಾಯಗಳನ್ನು ಯಥಾಶಕ್ತಿ ತಿಳಿಸುವದಕ್ಕೆ ಪ್ರಯತ್ನಿಸುವೆವು.

ವಿಧವಾವಿವಾಹವು ಶಾಸ್ತ್ರಸಮ್ಮತವೇ ? ಅಥವಾ ಶಾಸ್ತ್ರವಿರುದ್ಧವೇ? ಎಂದು ವಿಚಾರ ಮಾಡುವದಕ್ಕೆ ಮೊದಲು ಯಾವ ಶಾಸ್ತ್ರದ ಸಮ್ಮತಿ ಇದ್ದರೆ ವಿಧವಾವಿವಾಹವು ಕರ್ತವ್ಯ ಕರ್ಮವಾಗುವದು? ಯಾವ ಶಾಸ್ತ್ರದ ಸಮ್ಮತಿ ಇಲ್ಲದಿದ್ದರೆ ತ್ಯಾಜ್ಯವಾಗುವದು? ಧರ್ಮಶಾಸ್ತ್ರವೆಂದರೆ ಯಾವುದು? ಎಂಬುದನ್ನು ವಿಚಾರ ಮಾಡುವದು ಅವಶ್ಯಕವಾಗಿರುವದು.

ಮನ್ವತ್ರಿ ವಿಷ್ಣುಹಾರೀತಯಾಜ್ಞವಲ್ಕ್ಯೋಶನೋಂಗಿರಾಃ|
ಯಮಾಪಸ್ತಂಬಸಂವರ್ತಾಃ ಕಾತ್ಯಾಯನಬೃಹಸ್ಪತೀ||
ಪರಾಶರವ್ಯಾಸಶಂಖ ಲಿಖಿತಾದಕ್ಷಗೌತಮೌ
ಶಾತಾತಪೊ ವಸಿಷ್ಠಶ್ಚ ಧರ್ಮಶಾಸ್ತ್ರಪ್ರಯೋಜಕಾಃ||

ಮನು, ಅತ್ರಿ, ವಿಷ್ಣು, ಹಾರೀತ, ಯಾಜ್ಞವಲ್ಕ್ಯ, ಉಶನಾ, ಅಂಗಿರಾ, ಯಮ, ಆಪಸ್ತಂಬ, ಸಂವರ್ತ, ಕಾತ್ಯಾಯನ, ಬೃಹಸ್ಪತಿ, ಪರಾಶರ, ವ್ಯಾಸ, ಶಂಖ, ಲಿಖಿತ, ದಕ್ಷ, ಗೋತಮ, ಶಾತಾತಪ, ವಸಿಷ್ಠ ಈ ಇಪ್ಪತ್ತು ಋಷಿಗಳು ಧರ್ಮಶಾಸ್ತ್ರಕರ್ತೃಗಳೆಂದು ಯಾಜ್ಞವಲ್ಕ್ಯಸ್ಮೃತಿಯ ಪ್ರಥಮಾಧ್ಯಾಯದಲ್ಲಿ ಬರೆದಿರುವದು.

ಇವರುಗಳಿಂದ ರಚಿಸಲ್ಪಟ್ಟ ಅಥವಾ ಸಂಗ್ರಹಿಸಲ್ಪಟ್ಟ ಧರ್ಮಶಾಸ್ತ್ರಗಳಲ್ಲಿ ಯಾವುದನ್ನು ಮಾಡಬಹುದೆಂದು ಹೇಳಿರುವದೋ ಅದೇ ಸನಾತನಧರ್ಮಾವಲಂಬಿಗಳಿಗೆ ಕರ್ತವ್ಯವು. ಅಲ್ಲದೆ ಈ ಎಲ್ಲಶಾಸ್ತ್ರಗಳಲ್ಲಿಯೂ ಯಾವದನ್ನು ನಿಷೇಧ ಮಾಡಿರುವರೋ ಅದನ್ನು ಸನಾತನ ಧರ್ಮಾವಲಂಬಿಗಳು ತ್ಯಜಿಸಬೇಕು, ಎಂದು ಅವಶ್ಯವಾಗಿಯೂ ಒಪ್ಪಬೇಕು.

ಈ ಇಪ್ಪತ್ತು ಸ್ಮೃತಿಕಾರರುಗಳಲ್ಲದೆ ಪುಲಸ್ತ್ಯ, ಗೋಭಿಲ, ಜಾಬಾಲಿ, ನಾರದ, ಬೊಧಾಯನ, ಋಷ್ಯಶೃಂಗ, ವ್ಯಾಘ್ರಪಾದ ಮೊದಲಾದ ಋಷಿಗಳ ವಚನವೂ ಸಹ ಧರ್ಮಶಾಸ್ತ್ರದಂತೆಯೇ ತಿಳಿಯಲ್ಪಟ್ಟಿದೆ.

ಇದರಮೇಲೆ ವಿಧವಾವಿವಾಹ ಪಕ್ಷದವರು——"ಎಲ್ಲಾ ಧರ್ಮಶಾಸ್ತ್ರಗಳೂ ಎಲ್ಲಾಯುಗಕ್ಕೂ ಅಲ್ಲವು. ಬೇರೆಬೇರೆ ಯುಗಗಳಿಗಾಗಿ ಬೇರೆಬೇರೆ ಧರ್ಮಶಾಸ್ತ್ರಗಳು ರಚಿಸಲ್ಪಟ್ಟಿವೆ, ಏಕೆಂದರೆ ಕೃತ, ತ್ರೇತ, ದ್ವಾಪರ, ಕಲಿ ಈ ನಾಲ್ಕು ಯುಗಗಳಲ್ಲಿ ಕ್ರಮವಾಗಿ ಮನುಷ್ಯರ ಶಕ್ತಿಯು ಕಡಿಮೆಯಾಗುತ್ತ ಬರುತ್ತದೆ. ಆದುದರಿಂದ ಒಂದೇಶಾಸ್ತ್ರದಲ್ಲಿ ಹೇಳಿರುವ ಕರ್ಮಗಳನ್ನು ಎಲ್ಲಾ ಯುಗಗಳಲ್ಲಿಯೂ ಅನುಷ್ಠಾನಕ್ಕೆ ತರುವದೆಂದರೆ ಬಹಳ ಕಷ್ಟವು.

ಮನುಷ್ಯನಿಗೆ ಯಾವ ಯುಗದಲ್ಲಿ ಎಷ್ಟರಮಟ್ಟಿನ ಶಕ್ತಿಯು ಇರುವದೋ ಅದಕ್ಕೆ ಉಪಯುಕ್ತವಾದ ಕರ್ಮಾನುಷ್ಠಾನ ವಿಧಿಯನ್ನು ತೋರ್ಪಡಿಸುವದಕ್ಕಾಗಿ ಋಷಿಗಳು ಧರ್ಮಶಾಸ್ತ್ರಗಳನ್ನು ರಚಿಸಿರುವರು. ಪರಾಶರಸ್ಮೃತಿಯಲ್ಲಿ—

ಕೃತೇತುಮಾನವಾಧರ್ಮಾಸ್ತ್ರೇತಾಯಾಂಗೌತಮಃಸ್ಮೃತಃ
ದ್ವಾಪರೇಶಂಖಲಿಖಿತೌಕಲೌಪಾರಾಶರಸ್ಮೃತಃ॥

ಕೃತಯುಗದಲ್ಲಿ ಮನುಸ್ಮೃತಿಯಲ್ಲಿ ಹೇಳಿರುವ ಧರ್ಮವೂ ತ್ರೇತಾಯುಗದಲ್ಲಿ ಗೌತಮಋಷಿಗಳು ಹೇಳಿರುವ ಧರ್ಮವೂ, ದ್ವಾಪರದಲ್ಲಿ ಶಂಖ ಮತ್ತು ಲಿಖಿತರು ಹೇಳಿರುವದೂ ಕಲಿಯುಗದಲ್ಲಿ ಪರಾಶರರು ಹೇಳಿರುವ ಧರ್ಮವೂ ವಿಹಿತವಾಗಿರುವದೆಂದು ಹೇಳಿರುವದು.

ಆದುದರಿಂದ ಕಲಿಯುಗದಲ್ಲಿ ಪರಾಶರಸ್ಮೃತಿಯನ್ನೇ ಆಶ್ರಯಿಸಬೇಕು. ಅಲ್ಲದೆ ಮನ್ವಾದಿ ಸ್ಮೃತಿವಚನಗಳೂ ಇತರ ಋಷಿಗಳ ವಚನವೂ ಪರಾಶರಸ್ಮೃತಿಗೆ ವಿರುದ್ಧಗಳಾಗದೆ ಇರುವದಾದರೆ ಅವುಗಳನ್ನು ಅಂಗೀಕರಿಸಬಹುದು. ಯಾವ ಭಾಗದಲ್ಲಿ ಅವುಗಳು ಪರಾಶರಸ್ಮೃತಿಗೆ ಪ್ರತಿಕೂಲಗಳಾಗಿವೆಯೋ ಆ ಭಾಗದಲ್ಲಿ ಪರಾಶರಸ್ಮೃತಿಯನ್ನೇ ಆಶ್ರಯಿಸಬೇಕು; ಎಂದು ಹೇಳುವರು. ಆದರೆ ನ

ಯಾಗಿ ವಿಚಾರಮಾಡಿ ನೋಡಿದರೆ ಇದು ಸರಿಯಲ್ಲವೆಂಬುವದು ಸ್ಪಷ್ಟಪಡುವದು.

ಕೃತಯುಗದಲ್ಲಿ ಮನುವಚನವಲ್ಲದೆ ಇತರ ಸ್ಮೃತಿವಚನಗಳೂ ಇತರಋಷಿ ವಾಕ್ಯಗಳೂ ಮನುವಚನಕ್ಕೆ ವಿರೋಧವಾಗಿ ಯಾವುದಾದರೂ ಒಂದು ವಿಷಯದಲ್ಲಿ ಒಂದೇ ಅಭಿಪ್ರಾಯವುಳ್ಳವುಗಳಾದಾಗ್ಯೂ ಅದನ್ನು ಒಪ್ಪದೆ ಮನುಸ್ಮೃತಿಯ ವಚನವನ್ನೇ ಪ್ರಧಾನವಾಗಿ ಎಣಿಸುತ್ತಿದ್ದರೆಂತಲೂ, ತ್ರೇತಾಯುಗದಲ್ಲಿ ಗೌತಮರು ಮನುವನ್ನು ಮೀರಿದರೆಂತಲೂ, ಈ ಯುಗದಲ್ಲಿ ಮನುವಚನಕ್ಕೆ ಅಷ್ಟು ಪ್ರಾಮಾಣ್ಯವಿಲ್ಲ. ಅಂದರೆ ಋಷಿಗಳೆಲ್ಲರೂ ಏಕಮತರಾಗಿ ಗೌತಮ ಋಷಿಗಳ ವಚನಕ್ಕೆ ವಿರೋಧಿಗಳಾದರೂ ಗೌತಮರ ವಾಕ್ಯವೇ ಪ್ರಧಾನವಾಗಿ ಎಣಿಸಲ್ಪಡುತ್ತಿತ್ತೆಂತಲೂ ಹಾಗೆಯೇ ದ್ವಾಪರದಲ್ಲಿ ಶಂಖಲಿಖಿತರ ವಚನವೂ ಕಲಿಯುಗದಲ್ಲಿ ಪರಾಶರವಚನವೂ ಎಲ್ಲಕ್ಕಿಂತಲೂ ಪ್ರಧಾನವಾಗಿರುವದೆಂತಲೂ ಈಶ್ವರಚಂದ್ರ ವಿದ್ಯಾಸಾಗರರು ಅಭಿಪ್ರಾಯಪಟ್ಟಿರುವರು. ಇದರಿಂದ ಇವರ ಮತದಲ್ಲಿ ಮನ್ವಾದಿ ಸ್ಮೃತಿವಚನಗಳೂ ಇತರ ಋಷಿವಚನಗಳೂ ಏಕಮತರಾಗಿ ಪರಾಶರವಚನಕ್ಕೆ ವಿರೋಧಿಗಳಾದರೂ ಕಲಿಯುಗದಲ್ಲಿ ಪರಾಶರ ವಚನವೇ ಪ್ರಧಾನವಾಗಿರುವದೆಂದು ಸ್ಪಷ್ಟಪಡುವದು ಆದರೆ ಈವಿಧವಾದ ವಿಚಿತ್ರಸಿದ್ಧಾಂತವು ಇದುವರಿಗೂ ಎಲ್ಲಿಯೂ ಕಂಡುಬರುವದಿಲ್ಲ. ಸ್ಮೃತಿಗಳಲ್ಲಿ ಪರಸ್ಪರ ವಿರೋಧವು ಕಂಡುಬಂದರೆ ಆ ವಿಷಯದಲ್ಲಿ ವೇದಪ್ರಮಾಣವನ್ನು ಹುಡುಕಿ ಅದಕ್ಕೆ ತಕ್ಕಂತೆ ನಿರ್ಣಯವನ್ನು ಮಾಡುತ್ತಿದ್ದರು ಅಂತಹವೇದಪ್ರಮಾಣವನ್ನು ತಿಳಿಸುವ ವೇದಜ್ಞರು ದೊರೆಯದೆ ಹೋದ ಸಂದರ್ಭದಲ್ಲಿ ಹೆಚ್ಚುಸ್ಮೃತಿಕಾರರು ಯಾತರಲ್ಲಿ ಒಂದೇ ಅಭಿಪ್ರಾಯ ವುಳ್ಳವರಾಗಿರುವರೋ ಆವಿಷಯವನ್ನೇ ಪ್ರಮಾಣವಾಗಿ ಭಾವಿಸುತ್ತಿದ್ದರು. ಇದೇ ವಿಷಯವು ಸರ್ವತ್ರ ಉಪಯುಕ್ತವಾದುದೆಂದು ಅದರ ವಿಚಾರವನ್ನೇ ವಿಸ್ತಾರವಾಗಿ ಬರೆಯುವೆವು.

ಧರ್ಮಕ್ಕೆ ಮೂಲವಾವುದು? ಧರ್ಮಪ್ರಮಾಣವೆಂದರೇನು? ಎಂಬ ವಿಷಯದಲ್ಲಿ ಮನುಸ್ಮೃತಿಯಲ್ಲಿ——

ವೇದೋಽಖಿಲೋ ಧರ್ಮಮೂಲಂಸ್ಮೃತಿಶೀಲೇಚತದ್ವಿದಾಂ।
ಆಚಾರಶ್ಚೈವಸಾಧೂನಾಮಾತ್ಮನಸ್ತುಷ್ಟಿರೇವಚ॥
ಯಃಕಶ್ಚಿತ್ಕಸ್ಯಚಿದ್ಧರ್ಮೋ ಮನುನಾಪರಿಕೀರ್ತಿತಃ।
ಸಸರ್ವೋಽಭಿಹಿತೋವೇದೇಸರ್ವಜ್ಞಾನಮಯೋಹಿಸಃ॥
ಸರ್ವಂತುಸಮವೇಕ್ಷ್ಯೇದಂ ನಿಖಿಲಂ ಜ್ಞಾನಚಕ್ಷುಷಾ।

ಶ್ರುತಿಪ್ರಾಮಾಣ್ಯತೋವಿದ್ವಾನ್ ಸ್ವಧರ್ಮೇನಿವಿಶೇತವೈ||
ಶ್ರುತಿಸ್ಮೃತ್ಯುದಿತಂ ಧರ್ಮಮನುತಿಷ್ಠನ್ ಹಿಮಾನವಃ|
ಇಹಕೀರ್ತಿಮವಾಪ್ನೋತಿ ಪ್ರೇತ್ಯಚಾನುತ್ತಮಂಸುಖಂ||
ಶ್ರುತಿಸ್ತುವೇದೋ ವಿಜ್ಞೇಯೋ ಧರ್ಮಶಾಸ್ತ್ರಂತುವೈಸ್ಮೃತಿಃ|
ತೆ ಸರ್ವಾರ್ಥೇಷ್ವಮೀಮಾಂಸ್ಯೇತಾಭ್ಯಾಂಧರ್ಮೋಹಿ ನಿರ್ಬಭೌ||
ಯೋವಮನ್ಯೇತತೇಮೂಲೇ ಹೇತುಶಾಸ್ತ್ರಾಶ್ರಯಾತ್ ದ್ವಿಜಃ|
ಸಸಾಧುಭಿರ್ಬಹಿಷ್ಕಾರ್ಯೋನಾಸ್ತಿಕೋವೇದನಿಂದಕಃ||
ವೇದಃಸ್ಮೃತಿಸ್ಸದಾಚಾರಃಸ್ವಸ್ಯಚಪ್ರಿಯಮಾತ್ಮನಃ|
ಏತಚ್ಚತುರ್ವಿಧಂಪ್ರಾಹುಸ್ಸಾಕ್ಷಾದ್ಧರ್ಮಸ್ಯ ಲಕ್ಷಣಂ||

ಎಲ್ಲ ವೇದಗಳೂ, ವೇದವೇತ್ತೃಗಳೂ, ಮನ್ವಾದಿಸ್ಮೃತಿಗಳೂ, ಅವರ ಬ್ರಹ್ಮಣ್ಯತೆ, ದೇವಪಿತೃಭಕ್ತಿ, ಸೌಮ್ಯತೆ, ಇನ್ನೊಬ್ಬರಿಗೆ ಕಷ್ಟವನ್ನು ಕೊಡದಿರುವದು, ನಿಸ್ಪೃಹತೆ, ಕೋಮಲತೆ, ಅಪಾರುಷ್ಯ, ಮಿತ್ರತೆ, ಪ್ರಿಯವಾದಿತೆ, ಕೃತಜ್ಞತೆ, ದಯಾಳುತೆ ಶರಣ್ಯತೆ, ಪರಮಶಾಂತಿ, ಎಂಬ ಹದಿಮೂರು ವಿಧವಾದ ಶೀಲಗಳೂ, ಸಾಧುಗಳ ಸದಾಚಾರವೂ, ತನ್ನ ತೃಪ್ತಿಯೂ, ಇವೆಲ್ಲವನ್ನೂ ಧರ್ಮಕ್ಕೆ ಮೂಲವೆಂದು ತಿಳಿಯಬೇಕು. ಮನುವು ಯಾರಿಗೆ ಯಾವುದು ಧರ್ಮವೆಂದು ಹೇಳಿರುವನೋ ಅದು ಅದೇ ರೀತಿಯಲ್ಲಿಯೇ ವೇದದಲ್ಲಿ ಹೇಳಿರುವದು.

ಭಗವಾನ್ ಮನುವು ವೇದಗಳನ್ನೆಲ್ಲವನ್ನೂ ತಿಳಿದವನು. ಈ ಶಾಸ್ತ್ರಗಳನ್ನೆಲ್ಲವನ್ನೂ ಜ್ಞಾನದೃಷ್ಟಿಯಿಂದ ವಿಚಾರಮಾಡಿ ವಿವೇಕಿಯಾದ ಪುರುಷನು ವೇದಮೂಲಕವಾದ ಕರ್ತವ್ಯಕರ್ಮವನ್ನರಿತು ಅದರ ಅನುಷ್ಠಾನವನ್ನು ಮಾಡುವನು. ಯಾವ ಮನುಷ್ಯನು ವೇದಗಳಲ್ಲಿಯೂ ಸ್ಮೃತಿಗಳಲ್ಲಿಯೂ ಹೇಳಿರುವ ಧರ್ಮಗಳನ್ನು ಅನುಷ್ಠಾನದಲ್ಲಿಟ್ಟುಕೊಂಡಿರುವನೋ ಅವನು ಈ ಲೋಕದಲ್ಲಿ ಕೀರ್ತಿಯನ್ನೂ ಪರಲೋಕದಲ್ಲಿ ಸ್ವರ್ಗಮೊದಲಾದ ಉತ್ತಮ ಫಲಗಳನ್ನೂ ಪಡೆಯುವನು. ವೇದವನ್ನು ಶ್ರುತಿಯೆಂತಲೂ ಧರ್ಮಶಾಸ್ತ್ರವನ್ನು ಸ್ಮೃತಿಯೆಂತಲೂ ಹೇಳುವರು. ಈ ಶ್ರುತಿಸ್ಮೃತಿಗಳನ್ನು ವಿರುದ್ಧ ತರ್ಕಗಳಿಂದ ವಿಚಾರಮಾಡಬಾರದು. ಏಕೆಂದರೆ ಈ ಶ್ರುತಿಸ್ಮೃತಿಗಳಿಂದಲೇ ಧರ್ಮವು ಸ್ವಯಂಪ್ರಕಾಶಿತವಾಗಿರುವದು. ಯಾರಾದರೂ ಮೂಲಭೂತಶ್ರುತಿಸ್ಮೃತಿಗಳನ್ನು ವಿರುದ್ಧತರ್ಕಗಳಿಂದ ಅಪಮಾನಪಡಿಸುವದಾದರೆ ಅಂತಹ ವೇದನಿಂದಕ ನಾಸ್ತಿಕ ಪುರುಷನನ್ನು ಸಾಧುಗಳು ಬಹಿಷ್ಕರಿಸಬೇಕು. ಮನು

ಮೊದಲಾದವರು ವೇದ, ಸ್ಮೃತಿ, ಶಿಷ್ಟಾಚಾರ, ತನ್ನ ಸಂತೊಷ, ಈ ನಾಲ್ಕನ್ನೂ ಧರ್ಮಕ್ಕೆ ಸಾಕ್ಷಾತ್ ಪ್ರಮಾಣವೆಂದು ಹೇಳಿರುವರು.

ಈ ಮನುವಚನವನ್ನು ವಿಶೇಷ ಧ್ಯಾನಪಟ್ಟು ವಿಚಾರಮಾಡಿದರೆ ಮನುಸ್ಮೃತಿಗೆ ವೇದಮೂಲವೆಂದು ಸ್ಪಷ್ಟಪಡುವದು. ಆದುದರಿಂದ ವೇದದಲ್ಲಿ ಯಾವುದನ್ನು ಮಾಡಬೇಕೆಂದು ಹೇಳಿರುವದೋ ಅಥವಾ ವೇದದಲ್ಲಿ ಯಾವುದನ್ನು ಕಲ್ಯಾಣ ಕಾರಕವೆಂದು ಪ್ರಶಂಸೆ ಮಾಡುವದೋ ಅದನ್ನು ಮಾನವರೆಲ್ಲರೂ ಅವಶ್ಯವಾಗಿಯೂ ಮಾಡಬೇಕು. ಹಾಗೆಯೇ ವೇದವು ಯಾವ ಕಾರ್ಯವನ್ನು ನಿಷೇಧಿಸುವದೋ ಅಥವಾ ಯಾವಕಾರ್ಯವನ್ನು ವೇದವು ಮನುಷ್ಯನ ಅಧೋಗತಿಗೆ ಕಾರಣವೆಂದು ನಿಂದಿಸುವದೋ ಅದನ್ನು ಮನುಷ್ಯರು ಖಂಡಿತವಾಗಿಯೂ ಮಾಡಬಾರದು. ಆದಕಾರಣ ಯಾವುದನ್ನು ಮಾಡಬೇಕು? ಯಾವುದನ್ನು ಮಾಡಬಾರದು? ಎಂಬುದನ್ನು ತಿಳಿಯುವುದಕ್ಕಾಗಿ ಪ್ರತಿಯೊಬ್ಬರೂ ವೇದಜ್ಞರಾಗಬೇಕು. ಆದರೆ ಎಲ್ಲರೂ ಹಾಗಾಗುವದೆಂದರೆ ಒಂದು ವಿಧವಾಗಿ ಅಸಂಭವವೇಸರಿ.

ವೇದವು ಸಮುದ್ರದಂತೆ ದುಸ್ತರವಾಗಿಯೂ, ದುರ್ಗಮವಾಗಿಯೂ ಇರುವದು. ಇದರ ಮರ್ಮವನ್ನರಿಯುವದು ಬಹಳ ಕಷ್ಟವು. ಪೂರ್ವಕಾಲದಲ್ಲಿ ವೇದಾಭ್ಯಾಸವು ಬ್ರಾಹ್ಮಣಸಾಮಾನ್ಯಕ್ಕೂ ಜೀವನದ ಮುಖ್ಯ ಕರ್ಮವಾಗಿಯೂ ನಿತ್ಯಕರ್ಮವಾಗಿಯೂ ಇದ್ದಿತು. ಆದರೂ ಎಲ್ಲರೂ ವೇದವನ್ನು ತಿಳಿದಿದ್ದರೆಂದು ಹೇಳಿಸಿಕೊಳ್ಳುತ್ತಿರಲಿಲ್ಲ. ಇದರಿಂದ ಋಷಿಗಳಾಗಿದ್ದರೂ ಎಲ್ಲರೂ ವೇದದ ಗೂಢಮರ್ಮವನ್ನು ತಿಳಿದಿದ್ದರೆಂದು ಹೇಳುವುದಕ್ಕೆ ಸಾಧ್ಯವಿಲ್ಲವೆಂದು ವ್ಯಕ್ತವಾಗುವದು. ಇದು ಕೇವಲ ನಮ್ಮ ಕಲ್ಪನೆಯೇ ಅಲ್ಲ. ಮನುಸ್ಮೃತಿ ಮೊದಲಾದವುಗಳಿಂದಲೂ ಇದು ಸ್ಪಷ್ಟವಾಗುವದು. ಮನುಸ್ಮೃತಿಯ ಪ್ರಥಮಾಧ್ಯಾಯದಲ್ಲಿ ಭಗವಾನ್ ಮನುವು ಏಕಾಗ್ರಚಿತ್ತದಿಂದ ಧ್ಯಾನಾರೂಢನಾಗಿ ಆಸನದಲ್ಲಿ ಕುಳಿತಿರುವಾಗ ಮಹರ್ಷಿಗಳು ಅವನ ಸಮಿಾಪಕ್ಕೆ ಬಂದು

"ಭಗವನ್ ಸರ್ವವರ್ಣಾನಾಂ ಯಥಾವದನುಪೂರ್ವಶಃ|
ಅನ್ತರಪ್ರಭವಾನಾಂಚ ಧರ್ಮಾನ್ನೋವಕ್ತುಮರ್ಹಸಿ||
ತ್ವಮೇಕೊಹ್ಯಸ್ಯಧರ್ಮಸ್ಯ ವಿಧಾನಸ್ಯಸ್ವಯಂಭುವಃ|
ಅಚಿಂತಸ್ಯಾಪ್ರಮೇಯಸ್ಯಕಾರ್ಯತತ್ವಾರ್ಥವಿತ್ಪ್ರಭೊ||

ಹೇ ಭಗವನ್? ಬಾಹ್ಮಣರೇ ಮೊದಲಾದ ನಾಲ್ಕುವರ್ಣದವರ ಮತ್ತು ವರ್ಣಸಂಕರ ಜಾತಿಗಳ ಸಕಲ ಧರ್ಮಗಳನ್ನೂ ನಮಗೆ ಕ್ರಮವಾಗಿ, ಯಥಾವತ್ತಾಗಿ ತಿಳಿಸಬೇಕು.

ಪ್ರಭುವೇ! ವೇದವು ಅನೇಕ ಶಾಖೆಗಳಿಂದ ವಿಭಕ್ತವಾಗಿರುವ ಕಾರಣ ಅಪಾರ ವಾಗಿ ಕಾಣುತ್ತಿರುವದು. ಮತ್ತು ಮೀಮಾಂಸೆ, ನ್ಯಾಯ ಮೊದಲಾದವುಗಳ ಸಹಾಯವಿಲ್ಲದೆ ಅದರ ತತ್ವವು ಸರಿಯಾಗಿ ತಿಳಿದುಬರುವದಿಲ್ಲ. ಸ್ಮೃತಿಮೊದಲಾದ ಶಾಸ್ತ್ರಗಳ ಮೂಲಕ ಅನುಮಾನದಿಂದ ತಿಳಿಯುವದಕ್ಕೆ ಯೋಗ್ಯವಾದ ಅಲೌಕಿಕ ಮತ್ತು ನಿತ್ಯವಾದ ವೇದದಿಂದ ಪ್ರಕಾಶಪಡಿಸಲ್ಪಟ್ಟ ಯಾಗವೇ ಮೊದಲಾಗಿ ಬ್ರಹ್ಮತತ್ವವನ್ನು ಸರಿಯಾದ ರೀತಿಯಲ್ಲಿ ತಿಳಿದಿರುವ ಪ್ರಾಜ್ಞನು ನೀನೊಬ್ಬನೇ ಆಗಿರುವಿ. ಎಂದುಪ್ರಶ್ನೆ ಮಾಡಿರುವದು.

ಪರಾಶರ ಸಂಹಿತೆಯಲ್ಲಿಯೂ ಸಹ

ಮಾನುಷಾಣಾಂಹಿತಂಧರ್ಮಂ ವರ್ತಮಾನೆ ಕಲೌಯುಗೆ|
ಶೌಚಾಚಾರಂಯಥಾವಚ್ಚ ವದಸತ್ಯವತೀಸುತ||
ತಚ್ಛ್ರುತ್ವಾಋಷಿವಾಕ್ಯಂತು-ಸಮಿದ್ಧಾಗ್ನ್ಯರ್ಕಸನ್ನಿಭಃ|
ಪ್ರತ್ಯುವಾಚಮಹಾತೇಜಾಃ ಶ್ರುತಿಸ್ಮೃತಿವಿಶಾರದಃ||

ಹೇ ಸತ್ಯವತೀ ನಂದನ! ಈ ಕಲಿಯುಗದಲ್ಲಿ ಮನುಷ್ಯರಿಗೆ ಹಿತಕರವಾದ ಧರ್ಮ, ಶೌಚ ಆಚಾರ, ಇವುಗಳನ್ನು ಹೇಳಬೇಕೆಂದು ಕೇಳಲಾಗಿ ಪ್ರಜ್ವಲಿತ ಅಗ್ನಿಗೂ ಸೂರ್ಯನಿಗೂ ಸಮಾನವಾದ ಮಹಾ ತೇಜಸ್ವಿಗಳಾದ ವ್ಯಾಸರು ಋಷಿಗಳಿಗೆ ಹೇಳಲಾರಂಭಿಸಿದರೆಂದು ಹೇಳಿರುವದು.

ಇದರಿಂದ ಕೃತಯುಗದಲ್ಲಿಯೂ ಸಹ ಋಷಿಗಳು ವೇದವೇತ್ತೃಗಳಾಗಿದ್ದರೂ ಎಲ್ಲಾ ಧರ್ಮವನ್ನೂ ವಿಚಾರ ಮಾಡಲಾರದವರಾಗಿದ್ದರು. ಅವರೂ ಸಹ ಆ ಸಮಯದಲ್ಲಿ ವೇದಧರ್ಮವನ್ನು ತಿಳಿದಿರುವ ಮಹಾತ್ಮರಿಂದ ಧರ್ಮೋಪದೇಶವನ್ನು ತೆಗೆದುಕೊಳ್ಳಬೇಕಾಗಿದ್ದಿತು ಎಂಬುದು ಸ್ಪಷ್ಟಪಡುವದು. ಈಗಲಾದರೋ ವೇದಚರ್ಚೆಯೇ ನಿಂತುಹೋಗಿರುವದು. ಯಾರಾದರೂ ವೇದಾಭ್ಯಾಸವನ್ನು ಮಾಡಿದಾಗ್ಯೂ ಸ್ವಲ್ಪ ಭಾಗಮಾತ್ರ ಪಾಠಮಾಡುವರು. ಈಗಿನ ಸ್ಥಿತಿಯಲ್ಲಿ ವೇದದ ಶಾಖೆಗಳನ್ನೆಲ್ಲವನ್ನೂ ಪೂರ್ಣವಾಗಿ ತಿಳಿದವರಿಲ್ಲವೇ ಇಲ್ಲವೆಂದರೂ ಅನುಚಿತವಾಗಲಾರದು. ಆದುದರಿಂದ ನಮಗೆ ಸ್ಮೃತಿಗಳೇ ಈಗ ವೇದಗಳಾಗಿವೆ. ಯಾವ ಧರ್ಮ ವಿಚಾರವನ್ನು ಮಾಡಬೇಕಾದರೂ ಸ್ಮೃತಿಗಳನ್ನೇ ನಾವು ಪ್ರಮಾಣವಾಗಿ ಅವಲಂಬಿಸಬೇಕಾಗಿದೆ. ಆದರೆ ಸ್ಮೃತಿಯು ಒಂದಾಗಿಲ್ಲ. ಹಿಂದೆ ಹೇಳಿದಂತೆ ಇಪ್ಪತ್ತು ಸ್ಮೃತಿಗಳಿವೆ. ಇದಲ್ಲದೆ ನಾರದ ಸಂಹಿತೆಯೇ ಮೊದಲಾದ ಇನ್ನೂ ಕೆಲವು ಸ್ಮೃತಿಗಳಿವೆ. ಇವೆಲ್ಲವೂ ಬೇರೆಬೇರೆ ಸಮಯಗಳಲ್ಲಿ ಬೇರೆಬೇರೆ

ಋಷಿಗಳ ಮೂಲಕ ಪ್ರಕಟವಾಗಿವೆ. ಪ್ರತಿ ಒಬ್ಬ ಸ್ಮೃತಿಕಾರರೂ ವೇದದಲ್ಲಿ ಹೇಳಿರುವವ್ಯವಸ್ಥೆಗಳನ್ನು ವಿಚಾರ ಮಾಡಿ ಧರ್ಮವನ್ನು ಉಪದೇಶಿಸಿರುವರು. ಸ್ಮೃತಿಗಳೊಳಗೆ ಪರಸ್ಪರ ವಿರೋಧವುಂಟಾದರೆ ಯಾವ ಸ್ಮೃತಿಯ ಉಪದೇಶ ದಂತೆ ನಡೆಯಬೇಕೆಂಬುವದನ್ನು ಇಲ್ಲಿ ವಿಚಾರ ಮಾಡಬೇಕಾದ ಅವಶ್ಯಕತೆಯು ಇರುವುದಿಲ್ಲ. ಏಕೆಂದರೆ ಸ್ಮೃತಿಗಳೆಲ್ಲವೂ ಒಂದೇ. ಯಾರು ಬೇಕಾದರೂ ಯಾವಸ್ಮೃತಿಯನ್ನಾದರೂ ಆಶ್ರಯಿಸಬಹುದು. ಎಲ್ಲರ ಧರ್ಮಕಾರ್ಯಗಳಲ್ಲಿಯೂ ಯಾವ ಬಾಧೆಯೂ ಬರುವದಿಲ್ಲ. ಆದರೆ ಈ ಸ್ಮೃತಿಗಳ ವ್ಯವಸ್ಥೆಯೊಳಗೆ ಪರ ಸ್ಪರ ವಿಪರೀತ ಭಾವವು ಇರುವುದಾದರೆ ಯಾವ ಸ್ಮೃತಿಯ ವ್ಯವಸ್ಥೆಯನ್ನು ಸ್ವೀಕ ರಿಸಬೇಕು? ಎಂಬುದನ್ನು ವಿಚಾರ ಮಾಡಬೇಕಾದುದು ಮಾತ್ರ ಅವಶ್ಯಕವಾಗಿ ಗಿರುವದು.

ಸ್ಮೃತಿಗಳಲ್ಲಿ ಅಲ್ಲಲ್ಲಿ ವ್ಯವಸ್ಥೆಗಳ ಭೇದವು ಕಂಡುಬರುವದು. ಸಕಲ ಧರ್ಮ ಶಾಸ್ತ್ರಗಳಿಗೂ ವೇದವೇ ಮೂಲವಾಗಿರುವದು. ಅಲ್ಲದೆ ಸ್ಮೃತಿಕಾರರುಗಳು ವೇ ದದ ತತ್ವವನ್ನೇ ತಮ್ಮ ತಮ್ಮ ಗ್ರಂಥಗಳಲ್ಲಿ ಬರೆದಿರುವರು. ಇಂತಹ ಸಂದರ್ಭದಲ್ಲಿ, ಸ್ಮೃತಿಗಳಲ್ಲಿ ಪರಸ್ಪರ ವ್ಯತ್ಯಾಸವಿರಬೇಕಾದರೆ ಆ ಅಂಶಗಳಲ್ಲಿ ಭ್ರಮದಿಂದಲೋ ಪ್ರಮಾದದಿಂದಲೋ ವೇದದ ಸರಿಯಾದ ವಿಚಾರವನ್ನು ಮಾಡುವ ಸಾಮರ್ಥ್ಯವು ಕೆಲವರಿಗೆ ಇರಲಿಲ್ಲವೆಂದು ಅವಶ್ಯಕವಾಗಿಯೂ ತೋರುವದು. ಹಾಗಿಲ್ಲವಾದರೆ ಹೀಗೆ ವಿರೋಧ ವುಂಟಾಗುತ್ತಿರಲಿಲ್ಲ. ಎಲ್ಲರೂ ಭ್ರಮಪ್ರಮಾದಗಳಿಲ್ಲದವರಾಗಿ ದ್ದರೆ ಎಲ್ಲರ ವೇದವ್ಯಾಖ್ಯಾನವೂ ಒಂದೇ ವಿಧವಾಗಿರಬೇಕಾದದ್ದಿತು. ಯಾವ ಅಂಶದಲ್ಲಿಯೂ ವಿರೋಧವಿರುತ್ತಿರಲಿಲ್ಲ. ಪರಸ್ಪರ ವಿರೋಧವು ಕಂಡುಬರುವ ದಾದರೆ ಆ ವಿಷಯದಲ್ಲಿ ಯಾರೋ ಸ್ಮೃತಿಕಾರರು ಭ್ರಾಂತರಾಗಿರಬೇಕೆಂದು ಒಪ್ಪಲೇ ಬೇಕಾಗುವದು, ವೇದದ ತತ್ವವನ್ನು ತಿಳಿಸುವದರಲ್ಲಿ ಯಾವ ಸ್ಮೃತಿ ಕಾರರೂ ತಪ್ಪು ಅಭಿಪ್ರಾಯ ವುಳ್ಳವರಾಗಿರಲಿಲ್ಲವೆಂದು ಹೇಗೆ ತಾನೆ ಹೇಳುವದ ಕ್ಕಾಗುದೀತು? ಆದುದರಿಂದ ವಿರೋಧಸ್ಥಲವಾವುದನ್ನಾದರೂ ವಿಚಾರ ಮಾಡುವ ದಕ್ಕೆ ಮೊದಲು ಯಾವ ಮತದಲ್ಲಿ ಭ್ರಮವಿರುವದೆಂದು ನೋಡಬೇಕು. ಹಾಗೆ ಮಾಡಬೇಕಾದರೆ ಯಾವ ಮೂಲಾಧಾರದ ಮೇಲೆ ಇದರ ರಚನೆಯಾಗಿರುವದೋ ಅದರೊಂದಿಗೆ ಇದನ್ನು ಹೋಲಿಸಿ ನೋಡಬೇಕು. ಎಲ್ಲಾ ಸ್ಮೃತಿಗಳಿಗೂ ವೇ ದವೇ ಮೂಲವಾಗಿರುವದು. ಆದುದರಿಂದ ಮನ್ವಾದಿ ಸ್ಮೃತಿಗಳೊಳಗೆ ಪರಸ್ಪರ ವಿರೋಧವಿರುವ ಭಾಗದಲ್ಲಿ ವೇದದಲ್ಲಿ ಹೇಳಿರುವದನ್ನೇ ಆಚರಿಸಬೇಕು. ಅಂದರೆ

ಯಾವಸ್ಮೃತಿಯ ಅರ್ಥಕ್ಕೂ ವೇದಾರ್ಥಕ್ಕೂ ಐಕಕಂತ್ಯವಿರುವದೋ ಆ ಸ್ಮೃತಿಯೇಮಾನ್ಯವಾಗುವದು. ಇತರ ಸ್ಮೃತಿಗಳಲ್ಲ. ಮನುಸ್ಮೃತಿಯಲ್ಲಿ ಈ ಮಾತುಸ್ಪಷ್ಟವಾಗಿಯೇ ಇರುವದು.

ಅರ್ಥಕಾಮೇಷ್ವಸಕ್ತಾನಾಂ ಧರ್ಮಜ್ಞಾನಂ ವಿಧೀಯತೇ|
ಧರ್ಮಂಜಿಜ್ಞಾಸಮಾನಾನಾಂ ಪ್ರಮಾಣಂಪರಮಂ ಶ್ರುತಿಃ||

ಅರ್ಥಕಾಮುಗಳಲ್ಲಿ ಅಸಕ್ತರಾದವರಿಗೆ ಧರ್ಮವು ಉಪದಿಷ್ಟವಾಗಿರುವದು. ಧರ್ಮವನ್ನು ತಿಳಿಯಲಪೇಕ್ಷೆಯುಳ್ಳವರಿಗೆ ಶ್ರುತಿಯೇ ಪರಮಪ್ರಮಾಣವು. ಅಂದರೆ ವೇದಕ್ಕೂ ಸ್ಮೃತಿಗೂ ಪರಸ್ಪರ ವಿರೋಧವಿರುವ ಸ್ಥಲದಲ್ಲಿ ವೇದವನ್ನೇ ಪ್ರಮಾಣವನ್ನಾಗಿಟ್ಟುಕೊಳ್ಳಬೇಕು. ಇದೇ ಅರ್ಥವನ್ನು ಜಾಬಾಲಿ ಋಷಿಗಳು——

ಶ್ರುತಿಸ್ಮೃತಿವಿರೋಧೇತು ಶ್ರುತಿರೇವಗರೀಯಸೀ|
ಅವಿರೋಧೆ ಸದಾಕಾರ್ಯಂ ಸ್ಮಾರ್ತಂವೈದಿಕವತ್ಸದಾ||

ಯಾವ ವಿಷಯದಲ್ಲಿ ಶ್ರುತಿಗೂ ಸ್ಮೃತಿಗೂ ವಿರೋಧವು ಕಾಣುವದೋ ಆ ವಿಷಯದಲ್ಲಿ ಶ್ರುತಿಯೇ ಮುಖ್ಯವು. ಎಲ್ಲಿ ವಿರೋಧವಿಲ್ಲವೋ ಅಲ್ಲಿ ಸ್ಮೃತಿಯನ್ನೇ ವೇದದಂತೆ ತಿಳಿದುಕೊಂಡು ಅದರಲ್ಲಿ ಹೇಳಿರುವಂತೆಯೇ ಆಚರಿಸಬೇಕು, ಎಂದು ಹೇಳಿರುವರು. ಈ ಪ್ರಮಾಣದಿಂದ ಸ್ಮೃತಿಗಳಲ್ಲಿ ಪರಸ್ಪರ ವಿರೋಧವು ಕಂಡುಬಂದರೆ ಯಾವ ಸ್ಮೃತಿಯು ವೇದಕ್ಕೆ ವಿರೋಧವಾಗಿ ಇಲ್ಲವೋ ಆ ಸ್ಮೃತಿಯನ್ನೇ ಮುಖ್ಯವಾಗಿಟ್ಟುಕೊಳ್ಳಬೇಕು ಎಂದು ಸಿದ್ಧವಾಗುವದು. ಆದರೆ ಇಂತಹ ಸ್ಮೃತಿಯೇ ವೇದಕ್ಕೆ ಅನುಕೂಲವಾದುದೆಂದು ನಿರ್ಧರಿಸುವದಕ್ಕೆ ನಮ್ಮಲ್ಲಿ ಎಷ್ಟರ ಮಟ್ಟಿನ ಶಕ್ತಿಯಿರುವದೆಂಬುವದನ್ನೂ ನಾವು ವಿಚಾರ ಮಾಡಿ ನೋಡಬೇಕಾಗಿದೆ. ಈಗಿನ ಸ್ಥಿತಿಯಲ್ಲಿ ನಮಗೂ ವೇದಕ್ಕೂ ಬಹಳ ದೂರವಿರುವದು. ಆದುದರಿಂದ ವೇದವನ್ನು ನೋಡಿ ಸ್ಮೃತಿಯನ್ನು ವಿಮರ್ಶಿಸುವದು ನಮ್ಮ ಶಕ್ತಿಗೆ ಸಾಧ್ಯವಾದುದಲ್ಲ. ಆದುಕಾರಣ ವೇದದ ಅರ್ಥಗಳನ್ನೇ ಸ್ಮರಣೆಗೆ ತಂದುಕೊಂಡು ಋಷಿಗಳು ಸಮಯ ಸಮಯದಲ್ಲಿ ತಮ್ಮ ತಮ್ಮ ಸ್ಮೃತಿಗಳನ್ನು ರಚಿಸುವದರಿಂದ ಆ ಸ್ಮೃತಿಗಳನ್ನೇ ಅವಲಂಬಿಸಿಕೊಂಡು ನಿಶ್ಚಯಮಾಡಿಕೊಳ್ಳುವದೇ ನಮಗೆ ಉಚಿತವಾದುದು.

ಇದಕ್ಕೆ ಎರಡು ಮಾರ್ಗವುಂಟು. ಸ್ಮೃತಿಗಳೊಳಗೆ ಯಾವುದು ಮುಖ್ಯವೆಂಬುವದನ್ನು ನಿಶ್ಚಯವಮಾಡಿಕೊಂಡು ಅದರವ್ಯವಸ್ಥೆಯಂತೆ ನಡೆಯುವದು ಒಂದು. ಇದರಿಂದ ಸಹಜವಾಗಿಯೇ ವಿರೋಧವು ಪರಿಹೃತವಾಗುವದು ಎರಡನೆಯದು. ಇಂತಹ ಸ್ಮೃತಿಯು ಮುಖ್ಯವಾದುದೆಂದು ನಿಶ್ಚಯವಾದ ಮೇಲೆ ಸ್ಮೃತಿಗಳೊಳಗೆ ಭ್ರಮಪ್ರಮಾದಗಳಿಲ್ಲದ ಸ್ಮೃತಿಯು ಯಾವದು ? ಸತ್ಯವಾಗಿಯೂ ಭ್ರಮಪ್ರಮಾದ ಶೂನ್ಯವಾಗಿಯೂ ಇರುವ ವೇದವನ್ನು ಯಾವದು ಅನುಸರಿಸಿರುವದು ? ಎಂಬುದನ್ನು ನೋಡಬೇಕಾದುದು. ಈ ವಿಮರ್ಶೆಯ ಭಾರವನ್ನು ಶಾಸ್ತ್ರಜ್ಞರಿಗೆ ವಹಿಸುವದೇ ನ್ಯಾಯವು. ಛಾಂದೋಗ್ಯಬ್ರಾಹ್ಮಣದಲ್ಲಿ

ಮನುರ್ವೈಯತ್ಕಿಂ ಚಿದವದತ್ತದ್ಭೇಷಜಂ ಭೇಷಜತಾಯಾಃ

ಮನುವಚನವು ಔಷಧಕ್ಕೂ ಔಷಧ ರೂಪವಾದುದು, ಅಂದರೆ ಮನುವಚನದ ಸಹಾಯದಿಂದ ಇತರ ಧರ್ಮಶಾಸ್ತ್ರಗಳ ಸತ್ಯತೆಯನ್ನು ನಿರ್ಧರಿಸಬೇಕೆಂದು ಹೇಳಿರುವದು.

ಹೀಗೆ ವೇದವನ್ನೂ ಮನುಧರ್ಮಶಾಸ್ತ್ರವನ್ನೂ ಸಹ ಇತರ ಧರ್ಮಶಾಸ್ತ್ರಗಳ ವಿಮರ್ಶೆಗೆ ಮೂಲವೆಂದು ಹೇಳಿರುವದರಿಂದ ಮನುಧರ್ಮಶಾಸ್ತ್ರವೇ ಪ್ರಧಾನವೆಂದು ಸ್ಪಷ್ಟವಾಗುವದು. ಬೃಹಸ್ಪತಿಗಳು——

ವೇದಾರ್ಥೋಪನಿಬದ್ಧತ್ವಾತ್ ಪ್ರಾಧಾನ್ಯಂಹಿಮನೋಃಸ್ಮೃತಂ ।
ಮನ್ವರ್ಥ ವಿಪರೀತಾತುಯಾಸ್ಮೃತಿಸ್ಸಾನಶಸ್ಯತೆ ॥

ಮನುಸ್ಮೃತಿಯು ವೇದದ ಅರ್ಥದೊಂದಿಗೆ ಮಿಳಿತವಾಗಿರುವದು. ಆದುದರಿಂದ ಸ್ಮೃತಿಗಳೊಳಗೆಲ್ಲಾ ಪ್ರಧಾನವಾಗಿರುವದು. ಇತರ ಸ್ಮೃತಿಗಳ ಅರ್ಥವು ಮನುವಚನಕ್ಕೆ ಪ್ರತಿಕೂಲವಾಗಿದ್ದರೆ ಅದನ್ನು ಗಮನಿಸಬಾರದೆಂದು ಹೇಳಿರುವರು.

ಕುಲ್ಲೂಕ ಭಟ್ಟರು——

ಪುರಾಣಂ ಮಾನವೋಧರ್ಮಃ ಸಾಂಗೋವೇದಶ್ಚಿಕಿತ್ಸಿತಂ ।
ಆಜ್ಞಾಸಿದ್ಧಾನಿ ಚತ್ವಾರಿ ನಹಂತವ್ಯಾನಿಹೇತುಭಿಃ ॥

ಪುರಾಣ, ಮನುಧರ್ಮಶಾಸ್ತ್ರ, ಸಾಂಗವಾದ ವೇದ, ಮತ್ತು ವೈದ್ಯಶಾಸ್ತ್ರ ಇವುಗಳು ಆಜ್ಞಾಸಿದ್ಧಗಳು. ಅಂದರೆ ಸೇವಕನು ಸ್ವಾಮಿಯ ಆಜ್ಞೆಯನ್ನು ಪಾಲಿಸುವಂತೆ ಎಲ್ಲರೂ ಇವುಗಳ ಆದೇಶದಂತೆ ನಡಿಯಬೇಕು. ವೇದವಿರುದ್ಧಗಳಾದ ಕುತರ್ಕಗಳಿಂದ ಇವುಗಳನ್ನು ಬದಲಾಯಿಸಬಾರದೆಂದು ಹೇಳುವ ಮಹಾಭಾರತದ ಶ್ಲೋಕವನ್ನು ಬರೆದಿರುವರು.

ವೇದವ್ಯಾಸರು ವೇದದ ತತ್ವವನ್ನು ಪೂರ್ಣರೀತಿಯಿಂದ ಅರಿತಿದ್ದರೆಂಬು ದನ್ನು ಎಲ್ಲರೂ ಬಲ್ಲರು. ಅವರೇ ಹೀಗೆ ಹೇಳಿರುವದರಿಂದ ಅವರು ಮನುಸಂಹಿ ತೆಯನ್ನು ವೇದಕ್ಕೆ ಸಮಾನವಾಗಿ ತಿಳಿದಿದ್ದರೆಂದು ಸ್ಪಷ್ಟಪಡುವದು.

ಇದಲ್ಲದೆ ಸ್ವಯಂ ಪರಾಶರರೂ ಸಹ—

" ಮನುನಾಚೈವಮೇಕೇನ ಸರ್ವಶಾಸ್ತ್ರಾಣಿಜಾನತಾ |

ಪ್ರಾಯಶ್ಚಿತ್ತಂತುತೇನೋಕ್ತಂಗೋಘ್ನಚಾಂದ್ರಾಯಣಂಚರೇತ್ ||

ಶಾಸ್ತ್ರಗಳನ್ನೆಲ್ಲವನ್ನೂ ಅರಿತಿರುವ ಮನುವು ಗೋಹತ್ಯಾಮಾತ್ರದಲ್ಲಿ ಚಾಂದ್ರಾ ಯಣ ವ್ರತವನ್ನಾಚರಿಸಬೇಕೆಂದು ಹೇಳಿರುವನೆಂದು ಬರೆದಿರುವರು. ಇದರಿಂದಲೂ ಶಾಸ್ತ್ರತತ್ವವನ್ನರಿತವರೊಳಗೆ ಮನುವೇ ಸರ್ವಪ್ರಧಾನನೆಂದು ಸಿದ್ಧವಾಗುವದು.

ಹೀಗೆ ಬ್ರಹ್ಮದೇವನ ಶ್ರೀಮುಖದಿಂದ ಹೊರಟ ವೇದವಾಕ್ಯ, ವೇದವ್ಯಾ ಸರು, ಪರಾಶರರು, ಇವರೆಲ್ಲರೂ ಮನುವನ್ನು ಸರ್ವಶ್ರೇಷ್ಠನೆಂದು ಸ್ವೀಕರಿಸಿರು ವರು. ಆದುದರಿಂದ ಮನುಸ್ಮೃತಿಗೆ ವಿರುದ್ಧವಾದ ಯಾವ ಸ್ಮೃತಿಯೂ ಆದರ ಣೀಯವಲ್ಲವೆಂದು ಸ್ಪಷ್ಟವಾಗಿಯೂ ಸಿದ್ಧವಾಗುವದು.

ಹೀಗಿರುವಾಗ ವಿಧವಾ ವಿವಾಹ ಪಕ್ಷದವರೊಳಗೆ ಅಗ್ರೇಸರರಾದ ಪಂಡಿತ ಈಶ್ವರ ಚಂದ್ರರು ಯಾವ ಪ್ರಮಾಣದಿಂದ ಅಥವಾ ಯಾವ ಯುಕ್ತಿಯ ಬಲದಿಂದ ವೇದವ್ಯಾಸರೇ ಮೊದಲಾದವರ ವಿಮರ್ಶೆಯನ್ನೂ ಖಂಡನಮಾಡಿ ಮನುಮಹಾ ತ್ಮನನ್ನು ದಿವ್ಯಸಿಂಹಾಸನದಿಂದ ಕೆಳಗೆ ತಳ್ಳುವ ಪ್ರಯತ್ನಮಾಡಿರುವರೆಂಬುವದ ನ್ನು ಈಗ ವಿಚಾರಮಾಡಬೇಕಾಗಿದೆ.

ಪರಾಶರರಿಗೆ ಪ್ರಾಧಾನ್ಯವನ್ನುಂಟುಮಾಡಬೇಕೆಂಬ ಅಧಿಕ ಆಗ್ರಹವು ಇ ವರಿಗೆ ಇರುವದೆಂದು ತೋರುವದು. ಏಕೆಂದರೆ ಅವರ ದೃಷ್ಟಿಯಲ್ಲಿಯೂ ಪರಾ ಶರರನ್ನು ಬಿಟ್ಟರೆ ವಿಧವಾ ವಿವಾಹದ ವ್ಯವಸ್ಥೆಯು ಇನ್ನೆಲ್ಲಿಯೂ ಇಲ್ಲ. ಪರಾ ಶರರಿಗೆ ಪ್ರಾಧಾನ್ಯವನ್ನು ಸ್ಥಾಪಿಸದೇ ಇದ್ದರೆ ಇವರ ವ್ಯವಸ್ಥೆಯು ಮೂಲವೇ ಭಿನ್ನವಾಗಿ ಹೋಗುವದು. ಆದುದರಿಂದಲೇ ಪಂಡಿತ ಈಶ್ವರ ಚಂದ್ರರು ಪ್ರಥಮ ದಲ್ಲಿ ಪರಾಶರ ಸ್ಮೃತಿಗೆ ಭಾಷ್ಯವನ್ನು ರಚಿಸಿರುವ ಮಾಧವಾಚಾರ್ಯರ ವಿಮರ್ಶೆ ಯನ್ನು ಅವಲಂಬಿಸಿ ವೇದಪ್ರಸಿದ್ಧವಾದ ಮನುಸ್ಮೃತಿಯ ಪ್ರಾಧಾನ್ಯವನ್ನು ದೂರಮಾಡಿ ಆದಿಪುರುಷನಾದ ಮನುಮಹಾತ್ಮನನ್ನು ಇತರ ಸ್ಮೃತಿಕಾರರುಗ ಳೊಂದಿಗೆ ಏಕಾಸನದಲ್ಲಿರಿಸುವ ಪ್ರಯತ್ನವನ್ನು ಮಾಡಿರುವರು.

ವೇದದ ವಿಾಮಾಂಸೆಯನ್ನು ಖಂಡಿಸಿ ಮಾಧವಾಚಾರ್ಯರನ್ನು ಅದಕ್ಕಿಂತಲೂ ಹೆಚ್ಚಿನವರನ್ನಾಗಿ ತಿಳಿದಂತೆ ಯಾರಾದರೂ ಭಾವಿಸಿಯಾರೆಂಬ ಭಯದಿಂದ ಈಶ್ವರ ಚಂದ್ರರು, ಮನುವು ನಾಲ್ಕು ಯುಗಗಳ ಧರ್ಮವನ್ನು ಹೇಳಿ ಇಲ್ಲವೆಂತಲೂ, ಅದು ಕೇವಲ ಕೃತಯುಗಕ್ಕೆ ಮಾತ್ರವೇ ಪ್ರಧಾನವೆಂತಲೂ, ಕಲಿಯುಗದ ಧರ್ಮವನ್ನು ಪರಾಶರರೊಬ್ಬರೇ ಹೇಳಿರುವರೆಂತಲೂ, ಆದುದರಿಂದ ಈಗಿನ ಧರ್ಮದ ವ್ಯವಸ್ಥೆಯಲ್ಲಿ ಪರಾಶರರ ಮತವೇ ಮುಖ್ಯವೆಂತಲೂ, ಅದು ಮನುವಿಗೆ ವಿರುದ್ಧವಾಗಿದ್ದರೂ ಬಾಧಕವಿಲ್ಲವೆಂತಲೂ, ಸ್ವೀಕರಿಸಿರುವರು.

ಮನುಧರ್ಮಶಾಸ್ತ್ರದ ಪ್ರಧಾನತೆಯನ್ನು ಸಡಲಿಸುವದಕ್ಕಾಗಿ ಉಕ್ತಪಂಡಿತರು ವೇದದ ವಿಮರ್ಶೆಯನ್ನು ಹೇಗೆ ಖಂಡಿಸಿರುವರೆಂಬುದನ್ನು ವಿಚಾರಮಾಡುವದಕ್ಕೆ ಮೊದಲು ಸ್ವಲ್ಪ ವಿಷಯವನ್ನು ತಿಳಿಯಬೇಕಾದುದು ಅವಶ್ಯಕವು. ಇದುವರಿಗೆ ವೇದದ ವಿಾಮಾಂಸೆಯನ್ನು ಖಂಡಿಸುವ ವೈದಿಕಮತಾವಲಂಬಿಗಳನ್ನು ಯಾರನ್ನೂ ಎಲ್ಲಿಯೂ ಕಣ್ಣಿನಿಂದ ನೋಡಲೂ ಇಲ್ಲ. ಕಿವಿಯಿಂದ ಕೇಳಿಯೂ ಇಲ್ಲ. ವೇದಕ್ಕೆ ವಿರುದ್ಧವಾಗಿರುವದಾದರೆ ವಿದ್ವಾಂಸರುಗಳು ಮಹರ್ಷಿಗಳ ವ್ಯವಸ್ಥೆಯನ್ನು ಸಹ ಸ್ವೀಕರಿಸುವದಿಲ್ಲ. ವೇದವೇ ಧರ್ಮಕ್ಕೆ ಮೂಲವಾದುದೆಂದು ಸೃಷ್ಟಿಕಾಲವನ್ನಾರಂಭಿಸಿ ಈಗಿನ ಘೋರ ಧರ್ಮವಿಪ್ಲವದಕಾಲದವರೆಗೂ ಎಲ್ಲರೂ ತಲೆಬಾಗಿ ಸ್ವೀಕರಿಸಿರುವರು. ವೇದವನ್ನು ಇತರ ಯುಕ್ತಿಗಳಿಂದ ಖಂಡಿಸುವದು ಹಾಗಿರಲಿ. ವೇದದಲ್ಲಿಯೇ ಪರಸ್ಪರ ವಿರುದ್ಧವಾದ ವಾಕ್ಯಗಳಿದ್ದರೆ ಒಂದು ಮತ್ತೊಂದನ್ನು ಖಂಡಿಸುವದೆಂದು ಭಾವಿಸದೆ ಸಮಯ ಸಮಯದಲ್ಲಿ ಮತ್ತು ಬೇರೆ ಬೇರೆ ಸ್ಥಳಗಳಲ್ಲಿ ಆ ವೇದಾಜ್ಞೆಗಳೆರಡನ್ನೂ ಪಾಲಿಸಬೇಕೆಂದು ಭಾವಿಸಲ್ಪಟ್ಟಿದೆ. ಇದು ಮನುಸ್ಮೃತಿಯಲ್ಲಿಯೇ ಸ್ಪಷ್ಟವಾಗಿರುವದು.

ಶ್ರುತಿದ್ವೈಧಂತು ಯತ್ರಸ್ಯಾತ್ ತತ್ರಧರ್ಮಾವುಭೌಸ್ಮೃತೌ |
ಉಭಾವಪಿಹಿ ತೌಧರ್ಮೌ ಸಮ್ಯಗುಕ್ತೌ ಮನೀಷಿಭಿಃ ||

ಪರಸ್ಪರ ವಿರುದ್ಧವಾದ ಎರಡು ಶ್ರುತಿಗಳನ್ನು ವಿದ್ವಾಂಸರು ಮುಖ್ಯವೆಂದೆಣಿಸಿ ಅವುಗಳಲ್ಲಿ ಹೇಳಿರುವುದೆರಡೂ ಶ್ರೇಷ್ಠಧರ್ಮಗಳೆಂದು ಹೇಳಿರುವರು.

ಮನುಧರ್ಮಶಾಸ್ತ್ರವನ್ನು ಔಷಧಕ್ಕೂ ಔಷಧವೆಂದು ಹೇಳಿರುವದಕ್ಕೆ ಹೇಗೆ ಇತರ ಸ್ಮೃತಿಕಾರರುಗಳ ವ್ಯವಸ್ಥೆಯು ಅದನ್ನು ಸೇವಿಸುವವರ ಪ್ರಕೃತಿ ಮತ್ತು ವಿಕಾರಗಳನ್ನು ಔಷಧದಂತೆ ಶುದ್ಧಮಾಡುವದೋ ಹಾಗೆಯೇ ಮನುಧರ್ಮಶಾಸ್ತ್ರವು ಇತರ ಶಾಸ್ತ್ರಗಳನ್ನು ಶುದ್ಧಮಾಡುವ ಔಷಧರೂಪವೆಂದು ತಾತ್ಪರ್ಯವು.

ಇದು ಕೇವಲ ಪ್ರಶಂಸಾವಚನವಲ್ಲ. ಇತರ ಶಾಸ್ತ್ರಗಳ ಪರಿಶೋಧನವನ್ನು ಮನು ವಿನ ಮೂಲಕ ಮಾಡತಕ್ಕದೆಂದು ಸ್ವಯಂ ವೇದವೇ ಆಜ್ಞೆಯನ್ನಿತ್ತಿರುವದು. ಆದುದರಿಂದಲೇ ಮನುವಿನೊಂದಿಗೆ ಇತರರ ತುಲನೆಯು ಆಗಲಾರದು. ಶಾಸ್ತ್ರ ಗಳಲ್ಲಿ ವೇದವ್ಯಾಸರ ಪ್ರಶಂಸೆಯು ಬಹಳವಿರುವದು. ಅಂತಹ ವೇದವ್ಯಾಸರೂ ಕೂಡ ಮನುವಚನವನ್ನು ತಲೆಬಾಗಿ ವಿಚಾರವಿಲ್ಲದೆ ಪಾಲಿಸುವದಕ್ಕೆ ಯೋಗ್ಯವೆಂ ದು ಸ್ವೀಕಾರಮಾಡಿರುವರು. ಆದರೆ ಮಾಧವಾಚಾರ್ಯರು ಪರಾಶರಸ್ಮೃತಿಗೆ ಭಾಷ್ಯವನ್ನು ಬರೆಯುವ ಕಾಲದಲ್ಲಿ ಈ ವಿಷಯವನ್ನು ವಿಚಿತ್ರವಾಗಿ ವಿಮರ್ಶೆ ಮಾಡಿರುವರು. ಅದನ್ನು ಯಾರೂ ಸ್ವೀಕಾರಮಾಡಲಾರರು.

ವೇದದಲ್ಲಿ ಪರಾಶರಪುತ್ರರೆಂದು ವೇದವ್ಯಾಸರನ್ನು ಹೇಳಿ ಪ್ರಶಂಸೆಮಾ ಡಿರುವದರಿಂದ ಪರಾಶರಪ್ರಶಂಸೆಯೂ ಆಗಿಯೇ ಇರುವದು. ಆದುದರಿಂದ ಮನುಪರಾಶರರಿಬ್ಬರೂ ಸಮಾನರು, ಎಂದು ಮಾಧವಾಚಾರ್ಯರು ಬರೆದಿರುವರು.

> ಅಸ್ತುವಾಕಥಂಚಿನ್ಮನುಸ್ಮೃತೇಃ ಪ್ರಾಮಾಣ್ಯಂ ತಥಾಪಿ ಪ್ರಕೃ
> ತಾಯಾಃ ಪರಾಶರಸ್ಮೃತೇಃ ಕಿಮಾಯಾತಂತ್ರೇನ ನಹಿಮನೋರಿವ
> ಪರಾಶರಸ್ಯ ಮಹಿಮಾಸಂಕ್ವಚಿದ್ವೇದಃಪ್ರಖ್ಯಾಪಯತಿ, ತಸ್ಮಾತ್ತ
> ದೀಯ ಸ್ಮೃತೇರ್ದುರ್ನಿರೂಪಂ ಪ್ರಾಮಾಣ್ಯಂ ||

ಯಾವುದೋ ಒಂದು ವಿಧದಿಂದ ಮನುಸ್ಮೃತಿಗೆ ಪ್ರಾಮಾಣ್ಯವು ಸಿದ್ಧವಾದ ರೂ ಅದರಿಂದ ಪರಾಶರ ಸ್ಮೃತಿಗೆ ಬಂದುದೇನು? ವೇದದಲ್ಲಿಯೂ ಮನುವಿ ನಂತೆ ಪರಾಶರರ ಮಹಿಮೆಯನ್ನು ಹೇಳಲಿಲ್ಲವಾದುದರಿಂದ ಪರಾಶರಸ್ಮೃತಿಗೆ ಪ್ರಾ ಮಾಣ್ಯವನ್ನು ಸಿದ್ಧಪಡಿಸುವದು ಕಷ್ಟವೇ ಸರಿ ಎಂದು ಮೊದಲೇ ಹೇಳಿರುವರು.

ಪರಾಶರಸ್ಮೃತಿಗೆ ಪ್ರಾಮಾಣ್ಯವನ್ನು ತೋರಿಸುವದರಲ್ಲಿ ಎಷ್ಟುಕಷ್ಟಪಡ ಬೇಕಾಯಿತೆಂಬುವದು ಮಾಧವಾಚಾರ್ಯರ ಮೇಲಿನ ಕಥನದಿಂದಲೇ ವ್ಯಕ್ತವಾಗು ವದು. ಯಾವ ವಿಧದಿಂದಲೂ ಪರಾಶರರಿಗೆ ಎಲ್ಲರಿಗಿಂತಲೂ ಅಧಿಕಪ್ರಾಮಾಣ್ಯ ವನ್ನು ಸಿದ್ಧಪಡಿಸಲಾಗದೆ ಹೋದಾಗ ಕೊನೆಗೆ ಮಾಧವಾಚಾರ್ಯರು ಒಂದು ಹೊ ಸಯುಕ್ತಿಯನ್ನು ಕಲ್ಪಿಸಿದರೇನೆಂದರೆ, ವೇದವ್ಯಾಸರ ಮಹಿಮೆಯನ್ನು ಸರ್ವರೂ ಒಪ್ಪಿಕೊಂಡಿರುವರು. ಪರಾಶರ ಪುತ್ರರೆಂದು ವೇದವ್ಯಾಸರನ್ನು ವೇದದಲ್ಲಿ ಉ ಲ್ಲೇಖಿಸಿರುವದರಿಂದ ಪರಾಶರರ ಮಹಿಮೆಯು ಅಚಿಂತ್ಯವೆಂದೇ ಸಿದ್ಧವಾಗುವದು.

ಆದುದರಿಂದ ಮನುಪರಾಶರರಿಬ್ಬರೂ ಸಮಾನರೆಂಬಂಶದಲ್ಲಿ ಸಂದೇಹ ವೇ ಇಲ್ಲ; ಇದೇ ಪ್ರಮಾಣವನ್ನು ಪಂ|| ಈಶ್ವರಚಂದ್ರರು ತಮ್ಮ ಪುಸ್ತಕದಲ್ಲಿ ಬರೆದಿರುವರು.

ಇದನ್ನು ವಿಚಾರಮಾಡಿದರೆ ವ್ಯಾಸರನ್ನು ಪರಾಶರರ ಪುತ್ರರೆಂದು ಪ್ರಶಂಸಿಸಿದ ಮಾತ್ರದಿಂದ ಪರಾಶರರನ್ನೂ ಪ್ರಶಂಸಿಸಿದ ಹಾಗಾಗುವದಿಲ್ಲ. ಕೇವಲ ಪರಾಶರರ ಪರಿಚಯವು ಲಭಿಸುವದು. ಕೇವಲ ವ್ಯಾಸರೆಂದೇ ಹೇಳಿದ್ದರೆ ಯಾವ ವ್ಯಾಸರೆಂದು ಸಂಶಯವುಂಟಾಗುತ್ತಿದ್ದಿತು. ಏಕೆಂದರೆ ಪರಾಶರರ ಕಥನಾನುಸಾರವಾಗಿ ಇದುವರಿಗೆ ಇಪ್ಪತ್ತೆಂಟು ವ್ಯಾಸರಾಗಿರುವರು. ಅವರೊಳಗೆ ಕೃಷ್ಣದ್ವೈಪಾಯನರು ಇಪ್ಪತ್ತೆಂಟನೆಯ ವ್ಯಾಸರಾಗಿರುವರು. ವಿಷ್ಣುಪುರಾಣದಲ್ಲಿ

ಯಸ್ಮಿನ್ ಮನ್ವಂತರೆವ್ಯಾಸಾಯೆಯೆತಾಂಸ್ತಾನ್ನಿಬೋಧಮೆ |
ದ್ವಾಪರೆ ಪ್ರಥಮೆವ್ಯಸ್ತಸ್ಸ್ವಯಂ ವೇದಸ್ಸ್ವಯಂಭುವಾ ||
ದ್ವಿತೀಯೆ ದ್ವಾಪರೆಚೈವ ವೇದವ್ಯಾಸಃಪ್ರಜಾಪತಿಃ |
ತೃತೀಯೆ ಚೋಶನಾವ್ಯಾಸಶ್ಚತುರ್ಥೇತು ಬೃಹಸ್ಪತಿಃ ||
ತಸ್ಮಾದಸ್ಮತ್ಪಿತಾಶಕ್ತಿರ್ವ್ಯಾಸಸ್ತಸ್ಮಾದಹಂಮುನೆ |
ಜಾತುಕರ್ಣೋಭವಸ್ಮತ್ತಃ ಕೃಷ್ಣದ್ವೈಪಾಯನಸ್ತತಃ ||
ಅಷ್ಟಾವಿಂಶತಿ ರಿತ್ಯೇತೇ ವೇದವ್ಯಾಸಾಃಪುರಾತನಾಃ |
ಏಕೋವೇದಶ್ಚತುರ್ಧಾತುತ್ಯೈಃಕೃತೋ ದ್ವಾಪರಾದಿಷು ||
ಭವಿಷ್ಯೇ ದ್ವಾಪರೆಚೈವ ದ್ರೌಣಿರ್ವ್ಯಾಸೋಭವಿಷ್ಯತಿ |
ವ್ಯತೀತೆ ಮಮಪುತ್ರೇಽಸ್ಮಿನ್ ಕೃಷ್ಣದ್ವೈಪಾಯನೆಮುನೆ ||

ಯಾವಯಾವ ಮನ್ವಂತರದಲ್ಲಿ ಯಾರುಯಾರು ವ್ಯಾಸರು, ಅಂದರೆ ವೇದವ್ಯಾಖ್ಯಾನವನ್ನು ಮಾಡುವರು? ಎಂಬುವದನ್ನು ಹೇಳುವೆನು. ಮೊದಲು ಬ್ರಹ್ಮನು ವ್ಯಾಸನಾದನು. ಎರಡನೇವ್ಯಾಸನು ಪ್ರಜಾಪತಿಯು. ಮೂರನೆಯವನು ಉಶನಾ, ನಾಲ್ಕನೆಯವನು ಬೃಹಸ್ಪತಿಯು, ಹಾಗೆಯೇ ಇಪ್ಪತ್ತೈದನೆಯವನು ನನ್ನ ತಂದೆಯಾದ ಶಕ್ತಿ ಅಂದರೆ ಪರಾಶರರ ತಂದೆಯಾದ ಶಕ್ತಿ ಇಪ್ಪತ್ತಾರನೆಯುವನು ನಾನು, ಅಂದರೆ ಪರಾಶರರು, ಇಪ್ಪತ್ತೇಳನೆಯುವನು. ಜಾತುಕರ್ಣನು. ಇಪ್ಪತ್ತೆಂಟನೆಯವನು ಕೃಷ್ಣದ್ವೈಪಾಯನನು.. ಇಷ್ಟು ವ್ಯಾಸರುಗಳು ಆಗಿಹೋದರು. ಮುಂದೆ ದ್ರೌಣಿಯೆಂಬುವನು ವ್ಯಾಸನಾಗುವನು ಹೀಗೆ ವೇದವ್ಯಾಖ್ಯಾನವನ್ನು ಮಾಡುವ ಋಷಿಗಳೆಲ್ಲರೂ ವ್ಯಾಸರೆನಿಸಿಕೊಳ್ಳುವರು. ವ್ಯಾಸ, ಎಂಬ

ಪದವು ಉಪಾಧಿವಾಚಕ ಶಬ್ದವಾಗಿರುವದು. ಆದುದರಿಂದ ಪರಾಶರಪುತ್ರ ರಾದ ವ್ಯಾಸರಸ್ನು ಪಾರಾಶರ್ಯ, ಅಥವಾ, ಕೃಷ್ಣದ್ವೈಪಾಯನ ಎಂಬ ಹೆಸ ನಿಂದ ಹೇಳದೆಇದ್ದರೆ; ಇಂತಹ ವ್ಯಾಸರೆಂದು ಹೇಗೆ ತಿಳಿಯಬೇಕು? ಇವ ಮುಖ್ಯವಾದ ನಾಮವು ಕೃಷ್ಣನೆಂದು ಇದ್ದುದರಿಂದ ಕೃಷ್ಣನೆಂಬ ನಾಮವ ಅನೇಕರಿಗೆ ಉಂಟು. ಆದುದರಿಂದ ಕೇವಲ ಕೃಷ್ಣನೆಂದು ಹೇಳಿದರೆ ಇವ ಬೋಧವಾಗಲಾರದು. ಎಂದು ಕೃಷ್ಣದ್ವೈಪಾಯನ ಎಂದು ಹೇಳಿರುವರು.

ಒಂದುವೇಳೆ ಪರಾಶರ ಪುತ್ರರೆಂದು ಹೇಳಿದ ಮಾತ್ರದಿಂದಲೇ ವೇದವ್ಯಾಸ ರಿಗೆ ಪ್ರಶಂಸೆಯುಂಟಾಗಿರುವದೆಂದು ಹೇಳುವದಾದರೆ ವ್ಯಾಸರ ಪ್ರಶಂಸೆಯನ್ನು ಮಾಡದೆ ಮೂಲಕಾರಣರಾದ ಪರಾಶರರನ್ನೇ ಪ್ರಶಂಸೆಮಾಡಿ ಅನಂತರದಲ್ಲಿ ಅವರ ಮಗ ವ್ಯಾಸರೆಂದು ಹೇಳಬೇಕಾಗಿದ್ದಿತು. ಪರಾಶರರ ಪ್ರಶಂಸೆಯು ಗಂಧವೇ ಇಲ್ಲದಿರುವಾಗ ಪರಾಶರರ ಪುತ್ರರಾದುದೇ ವ್ಯಾಸರ ಪ್ರಶಂಸೆಗೆ ಮೂಲಕಾರಣ ವೆಂದು ಹೇಗೆ ತಿಳಿಯಬಹುದು? ಭಾರ್ಗವ, ಜಾಮದಗ್ನ್ಯ, ಎಂದು ಹೇಳಿದರೆ ಭೃಗು, ಜಮದಗ್ನಿ, ಇವರುಗಳ ಬೋಧವಾಗವೆ ಭೃಗುಪುತ್ರ, ಜಮದಗ್ನಿ ಪುತ್ರರೆಂದೇ ಬೋಧವಾಗುವಂತೆ ಪಾರಾಶರ್ಯರೆಂದು ಹೇಳುವದರಿಂದ ವೇದವ್ಯಾಸರೇ ಆಗುವರು. ಒಂದು ವೇಳೆ ಪರಾಶರ ಪುತ್ರರೆಂದು ಹೇಳುವದರಿಂದ ಪರಾಶರರು ಅವರ ಪುತ್ರರು ವ್ಯಾಸರು ಇವರಿಬ್ಬರ ಬೋಧವೂ ಆಗುವದೆಂದು ಹೇಳುವದಾದರೆ ಹಾಗೆ ಹೇಳಲಾ ಗುವದಿಲ್ಲ ವಸಿಷ್ಠ, ಅತ್ರಿ, ಯಾಜ್ಞವಲ್ಕ್ಯ ಮೊದಲಾದ ಋಷಿಗಳ ಪ್ರಶಂಸೆ ಯು ವೇ ದದಲ್ಲಿ ಸ್ಪಷ್ಟವಾಗಿರುವದು ಪರಾಶರಪ್ರಶಂಸೆಗೆ ವೇದದಲ್ಲಿ ಯಾವ ಶಬ್ದವೂ ಇರಲಿ ಲ್ಲವೇ? ಅಥವಾ ಪರಾಶರರ ಮಹಿಮೆಯನ್ನು ವರ್ಣಿಸುವದಕ್ಕೆ ವೇದಕ್ಕೆ ಶಕ್ತಿ ಯೇ ಇರಲಿಲ್ಲವೇ? ಪುತ್ರನ ಪ್ರಶಂಸೆಯಿಂದ ತಂದೆಯ ಪ್ರಶಂಸೆಯು ತಾ ನಾಗಿಯೇ ಆಗುವದೆಂದರೆ ವ್ಯಾಸರು ಜನಿಸಿದ ವಂಶದ ಆದಿಪುರುಷನ ಪ್ರಶಂಸೆಯೂ ಇದರಿಂದ ಸಿದ್ಧವಾಗಬಹುದು. ಹಾಗಾದರೆ ಆ ಆದಿಪುರುಷನು ಮನುವೇ ಆಗು ವನು. ಹೀಗೆ ಕೃತ, ತ್ರೇತಾ, ದ್ವಾಪರ, ಕಲಿಗಳಲ್ಲಿ ಯಾರ ಪ್ರಶಂಸೆಯನ್ನು ಮಾಡಿ ದರೂ ಅದೆಲ್ಲವೂ ಮನುವಿಗೇ ಸೇರಿದುದೆಂದು ಹೇಳಬೇಕಾಗುವದು. ಏಕೆಂದರೆ ಮನುಷ್ಯಮಾತ್ರಕ್ಕೂ ಮನುವೇ ಆದಿಪುರುಷನಾಗಿರುವನು. ಆದುದರಿಂದ ಮಾಧ ವಾಚಾರ್ಯರ ವಿಚಾರವನ್ನು ಯಾವ ವಿಚಾರಶೀಲನೂ ಆದರಿಸಲಾರನು. ಮಾಧ ವಾಚಾರ್ಯರು ಬಹಳ ದೊಡ್ಡ ಚತುರ ಪಂಡಿತರೇ ಆಗಿದ್ದಾಗ್ಯೂ ಅವರ ವಚನವು ಶಿಲಾರೇಖೆಯಾಗಲಾರದು. "ವಿಧವಾ ವಿವಾಹವು ಕಲಿಯುಗಕ್ಕೆ ಅಲ್ಲ. ಇತರ

ಯುಗಗಳಿಗೆ" ಎಂದು ಮಾಧವಾಚಾರ್ಯರು ವ್ಯವಸ್ಥೆಮಾಡಿದ ಸ್ಥಲದಲ್ಲಿ ಅದನ್ನು ಒಪ್ಪದೆ ಈಶ್ವರಚಂದ್ರವಿದ್ಯಾಸಾಗರರೇ ಮಾಧವಾಚಾರ್ಯರ ವಿಷಯದಲ್ಲಿ "ಮಾಧ ವಾಚಾರ್ಯರು ಪ್ರಧಾನ ಪಂಡಿತರೇ ಹೌದು, ಎಲ್ಲಾ ವಿಧದಲ್ಲಿಯೂ ಮಾನ್ಯರೂ ಹೌದು. ಆದರೂ ಅವರು ಭ್ರಮಪ್ರಮಾದಶೂನ್ಯರಾಗಿರಲಿಲ್ಲ. ಅವರ ಎಲ್ಲಾ ವ್ಯವಸ್ಥೆಗಳೂ ವೇದದಂತೆ ಪ್ರಮಾಣಗಳೆಂದು ತಿಳಿಯಲಾಗುವದಿಲ್ಲ. ಆದುದರಿಂ ದಲೇ ಅವರ ಅಸಂಗತ ವ್ಯವಸ್ಥೆಗಳನ್ನು ಅನೇಕ ಗ್ರಂಥಕಾರರುಗಳು ಅಲ್ಲಲ್ಲಿ ಖಂಡ ನಮಾಡಿರುವರು" ಎಂದು ಬರೆದಿರುವರು.

ಹೀಗೆ ವಿಧವಾ ವಿವಾಹದ ವಿಷಯವಾದ ಪರಾಶರರ ವ್ಯವಸ್ಥೆಯು ಇತರ ಯುಗಗಳಿಗೆಂದು ಹೇಳಿದ ಕಾರಣದಿಂದ ಮಾಧವಾಚಾರ್ಯರ ವಚನವು ಪಂಡಿತ ಈಶ್ವರಚಂದ್ರವಿದ್ಯಾಸಾಗರರಿಗೆ ಸರಿಯಾಗಲಿಲ್ಲವಾದುದರಿಂದ ಇತರ ಪಂಡಿತರ ಅವಲಂಬನದಿಂದ ಅದನ್ನು ಒಪ್ಪಲಿಲ್ಲ.

ಧರ್ಮಶಾಸ್ತ್ರಗಳೊಳಗೆ ಮನುಧರ್ಮಶಾಸ್ತ್ರವು ಪ್ರಧಾನವಲ್ಲವೆಂದು ಕೇವಲ ಮಾಧವಾಚಾರ್ಯರೊಬ್ಬರೇ ಹೇಳಿರುವರು. ಇದಕ್ಕೆ ಪ್ರತಿಯಾಗಿ ವೇದ, ಬೃಹ ಸ್ಪತಿ, ವೇದವ್ಯಾಸ, ಮತ್ತು ಸ್ವಯಂಪರಾಶರರೂ ಸಹ ಮನುಧರ್ಮಶಾಸ್ತ್ರವನ್ನು ಸರ್ವಶಾಸ್ತ್ರಕ್ಕೂ ಶಿರೋಭೂಷಣವೆಂದು ಪ್ರಶಂಸೆಮಾಡಿರುವರು. ಇದರಲ್ಲಿ ಯಾರ ಮಾತನ್ನು ನಾವು ನಂಬಬೇಕು.. ಎಂದು ವಿಚಾರಮಾಡಿದರೆ ಎಲ್ಲರೂ ನಾಲಿಗೆಯ ನ್ನಾಡಿಸದೆ ತಲೆಬಾಗಿ ವೇದ, ಬೃಹಸ್ಪತಿ, ವ್ಯಾಸ ಮೊದಲಾದವರ ವಾಕ್ಯವನ್ನೇ ಒಪ್ಪಬೇಕಾಗುವದು. ತನ್ನ ಪ್ರಯೋಜನಸಿದ್ಧಿಗಾಗಿ ಈಶ್ವರ ಚಂದ್ರರು ಸ್ವೀಕರಿಸಿ ರುವ ಮಾಧವಾಚಾರ್ಯರ ಮೀಮಾಂಸೆಯು ಇದರ ಮುಂದೆ ನಿಲ್ಲಲಾರದು. ಈ ವಿಷಯದಲ್ಲಿ ಇನ್ನು ಹೆಚ್ಚು ಪ್ರಮಾಣವನ್ನು ಕೊಡಬೇಕಾದ ಅವಶ್ಯಕತೆಯು ಇರುವದಿಲ್ಲ. ಇಂತಹ ಸಂದರ್ಭದಲ್ಲಿ ಹೀಗೆ ಅಸಂಬದ್ಧವಾದ ಸಂಗತಿಯನ್ನು ಕಲ್ಪಿಸಿ ಜನಗಳ ಮನಸ್ಸಿನಲ್ಲಿ ವಿಪರೀತ ಭಾವನೆಯನ್ನುಂಟುಮಾಡುವ ಪಂಡಿತ ಈಶ್ವರ ಚಂದ್ರ ವಿದ್ಯಾಸಾಗರರಂತಹ ಪುರುಷರ ಬುದ್ಧಿಗೆ ದುಃಖಪಡಬೇಕಾಗಿದೆ.

"ಮನ್ವರ್ಥವಿಪರೀತಾಯಾ ಸಾಸ್ಮೃತಿರ್ನಪ್ರಶಸ್ಯತೆ,

ಮನುಸ್ಮೃತಿಗೆ ವಿರುದ್ಧವಾದ ಸ್ಮೃತಿಯು ಪ್ರಶಂಸೆಗೆ ಯೋಗ್ಯವಲ್ಲ" ಎಂಬ ಬೃಹ ಸ್ಪತಿ ವಚನವನ್ನೂ

"ವೇದಾರ್ಥೋಪನಿಬದ್ಧತ್ವಾತ್ ಪ್ರಾಧಾನ್ಯಂಹಿ ಮನೋಃಸ್ಮೃತಂ"

ಮನುವು ವೇದಾರ್ಥವನ್ನು ಸಂಗ್ರಹಮಾಡಿರುವನು. ಆದುದರಿಂದ ಮನುಸ್ಮೃ

ತಿಯು ಸರ್ವಪ್ರಧಾನವಾದುದು, ಎಂಬುವದನ್ನೂ ಸಹ ಹೇಗೆ ತಾನೇ ಒಪ್ಪುವದಕ್ಕಾದೀತು? ಋಷಿಗಳೆಲ್ಲರೂ ತಮ್ಮ ತಮ್ಮ ಗ್ರಂಥಗಳಲ್ಲಿ ವೇದಾರ್ಥವನ್ನು ಸಂಗ್ರಹಮಾಡಿರುವರಾದುದರಿಂದ ಋಷಿಗಳೆಲ್ಲರನ್ನೂ ಸಮಾನರೆಂದೇ ಏಕೆ ಎಣಿಸಬಾರದು ?'' ಎಂಬುವದನ್ನೂ ಸಹ ಈಶ್ವರ ಚಂದ್ರ ವಿದ್ಯಾಸಾಗರರೇ ಬರೆದಿರುವರು. ಸ್ವಲ್ಪಕಾಲದವರಿಗೆ ಪಂಡಿತ ಈಶ್ವರಚಂದ್ರರ ಮಾತನ್ನು ಸ್ವೀಕಾರಮಾಡೋಣ. ಆಗಲೂ ಬೃಹಸ್ಪತಿ ವೇದವಾಸ್ಯರು ಪರಾಶರರು ಇವರುಗಳೂ ಭ್ರಮಪ್ರಮಾದ ಶೂನ್ಯರೇ ಆದರಷ್ಟೆ. ಅವರುಗಳ ಮಾತನ್ನು ಅಮಾನ್ಯವೆಂದು ಹೇಳುವ ಸಾಹಸವು ಹೇಗೆ ಉಂಟಾಗುವದು ? ಅಲ್ಲದೆ ಇವರು ತಮಗಿಂತಲೂ ಹೆಚ್ಚಿನ ಮಾನ್ಯರೆಂದು ಹೇಳಿರುವವರನ್ನು ಭ್ರಮಪ್ರಮಾದಗಳಿಗೆ ವಶೀಭೂತರಾದ ನಾವುಗಳು ಹೇಗೆತಾನೆ ಇತರರಿಗೆ ಸಮಾನರೆಂದು ಹೇಳಲು ಸಾಧ್ಯವು? ನಾವು ನಮ್ಮ ಅಲ್ಪಬುದ್ಧಿಯಲ್ಲಿ ಅವರ ವಿದ್ಯೆಯನ್ನೂ ಬುದ್ಧಿಯನ್ನೂ ಶಾಸ್ತ್ರಪಾರದರ್ಶಿತ್ವವನ್ನೂ ನಿಶ್ಚಯಿಸಲಾರೆವು.

ಅವರಲ್ಲಿ ಯಾರು ಯಾರಿಗಿಂತಲೂ ಸರ್ವಶಾಸ್ತ್ರಗಳ ತತ್ವವನ್ನು ಹೆಚ್ಚಾಗಿ ಅರಿತಿರುವರು ? ಯಾರು ಕಡಿಮೆಯಾಗಿರುವರು ? ಯಾರು ಎಷ್ಟರಮಟ್ಟಿಗೆ ಭ್ರಮಪ್ರಮಾದ ಶೂನ್ಯರಾಗಿದ್ದರು ? ಯಾರು ಎಷ್ಟರಮಟ್ಟಿಗೆ ವೇದದ ಗೂಢತತ್ವವನ್ನು ಅರಿತಿದ್ದರು ? ಎಂಬ ಅಂಶಗಳನ್ನು ಅವರು ಸ್ವಯಂ ಅರಿತವರಾಗಿದ್ದರು. ಆದುದರಿಂದಲೇ ಅವರ ಸ್ಮೃತಿಗಳಲ್ಲಿ ವಿರೋಧಧ ಸಂಶಯವುಂಟಾದರೆ ಅದರ ವಿಚಾರವನ್ನು ಯಾವರೀತಿಯಲ್ಲಿ ಮಾಡಬೇಕೆಂಬುವದನ್ನು ತಾವೇ ನಿಶ್ಚಯಮಾಡಿರುವರು. ಆದುದರಿಂದಲೇ ನಮ್ಮಲ್ಲಿ ಸರ್ವಗುಣಸಂಪನ್ನರಾಗಿಯೂ ಶಾಸ್ತ್ರಜ್ಞರಾಗಿಯೂ ಇರುವವರು ಇದನ್ನು ನಿಶ್ಚಯಮಾಡಿ ಸ್ವಾಯಂಭುವಮನುವನ್ನೇ ಸರ್ವಪ್ರಧಾನವನ್ನಾಗಿ ಸ್ವೀಕರಿಸಿರುವರು. ಈ ವಿಷಯವನ್ನು ನಾವು ವಿಚಾರಮಾಡುವದು ಅನಧಿಕಾರಚರ್ಚೆಎನ್ನಿಸಿಕೊಳ್ಳುವದು.

ಹೀಗೆ ಮನುಧರ್ಮಶಾಸ್ತ್ರವು ಧರ್ಮಶಾಸ್ತ್ರಗಳೊಳಗೆ ಪ್ರಧಾನವಾದುದು. ಎಲ್ಲಾ ಶಾಸ್ತ್ರಗಳ ವಿಚಾರಕ್ಕೂ ಆಧಾರಭೂತವಾದುದು. ಶಾಸ್ತ್ರಕ್ಕೂ ಶಾಸ್ತ್ರವಾಗಿರುವದು. ಅಂದರೆ ಮನುವಿಗೆ ವಿರುದ್ಧವಾದ ಯಾವ ಶಾಸ್ತ್ರವೂ ಮಾನ್ಯವಲ್ಲವೆಂಬುವದನ್ನು ಸರ್ವರೂ ಸ್ವೀಕರಿಸಬೇಕಾಗಿರುವದು.

"ಇತಿ ಪ್ರಥಮಾಧ್ಯಾಯಃ"

---

# ದ್ವಿತೀಯಾಧ್ಯಾಯಃ

ಪಂಡಿತ ಈಶ್ವರಚಂದ್ರರೇ ಮೊದಲಾದ ವಿಧವಾ ವಿವಾಹ ಪಕ್ಷದವರು "ಮನುಸ್ಮೃತಿಯಲ್ಲಿ ನಾಲ್ಕುಯುಗದ ಧರ್ಮವನ್ನೂ ಹೇಳಿ ಇಲ್ಲ. ಪರಾಶರಸ್ಮೃತಿಯಲ್ಲಿ ಕಲಿಯುಗದ ಧರ್ಮವನ್ನು ಮಾತ್ರ ಹೇಳಿ ಇದೆ. ಇತರ ಯುಗಗಳಧರ್ಮವನ್ನು ಹೇಳಿ ಇಲ್ಲ. ಪರಾಶರಸ್ಮೃತಿಯಲ್ಲಿ ಹೇಳಿ ಇರುವ ವಿಧವಾ ವಿವಾಹದ ವಿಷಯವಾದ ವಚನವು ಮನುಸ್ಮೃತಿಗೆ ವಿರುದ್ಧವಲ್ಲ. ಮತ್ತು ವಿರುದ್ಧವಾಗಿದ್ದರೂ ಕಲಿಯುಗದಲ್ಲಿ ಪರಾಶರರ ವ್ಯವಸ್ಥೆಯನ್ನೇ ಸ್ವೀಕರಿಸಬೇಕು." ಎಂದು ಹೇಳುವರು. ಈ ವಿಚಾರಗಳನ್ನು ಗೊತ್ತುಮಾಡುವುದಕ್ಕೆ ಮೊದಲು ಕೆಲವಂಶಗಳನ್ನು ವಿಚಾರಮಾಡುವದು ಅವಶ್ಯಕವಾಗಿರುವದು. ಅವು ಯಾವವೆಂದರೆ—

೧ ನಮ್ಮಲ್ಲಿ ಧರ್ಮಶಾಸ್ತ್ರಗಳೆಂದು ಪ್ರಸಿದ್ಧವಾದ ಇಪ್ಪತ್ತು ಸ್ಮೃತಿಗಳೂ ಒಂದು ಕ್ಲುಪ್ತವಾದ ಯುಗಕ್ಕಾಗಿ ಏರ್ಪಟ್ಟಿವೆಯೇ? ಅಥವಾ ಎಲ್ಲಾ ಯುಗಕ್ಕೂ ಏರ್ಪಟ್ಟಿವೆಯೇ?

೨ ಪರಾಶರರು ಹೇಳಿರುವ ಧರ್ಮಶಾಸ್ತ್ರವು ಪ್ರಾಮಾಣಿಕವೇ ಅಲ್ಲವೇ?

೩ ಪ್ರಾಮಾಣಿಕವಾದ ಪಕ್ಷದಲ್ಲಿ ಪರಾಶರ, ಬೃಹತ್ಪರಾಶರ ಇವೆರಡರಲ್ಲಿ ಯಾವದು ಪ್ರಾಮಾಣಿಕವು?

೪ ಪರಾಶರ ಸ್ಮೃತಿಯೇ ಪ್ರಮಾಣವಾದರೆ 'ನಷ್ಟೇಮೃತಪ್ರವ್ರಜಿತೆ' ಇತ್ಯಾದಿ ಶ್ಲೋಕವು ವಿಧವಾ ವಿವಾಹವಿಷಯವಾದುದೇ? ಅಲ್ಲವೇ?

೫ ವಿಧವಾ ವಿವಾಹವಿಷಯದ್ದೇ ಆದರೆ ಮನುವಿಗೂ, ಇತರ ಸ್ಮೃತಿಕಾರರಿಗೂ ವಿರುದ್ಧವೇ ? ಅಲ್ಲವೇ?

೬ ಮನು ಮತ್ತು ಇತರ ಸ್ಮೃತಿಕಾರರಿಗೆ ವಿರುದ್ಧವಾಗಿದ್ದು ಕಲಿಯುಗದಲ್ಲಿ ಪರಾಶರರು ಇದರ ವ್ಯವಸ್ಥೆಯನ್ನು ಮಾಡಿಇದ್ದರೆ ಅದನ್ನು ಪ್ರಮಾಣವೆಂದು ಸ್ವೀಕರಿಸಬಹುದೇ ? ಕೂಡದೇ?

ಮನ್ವಾದಿ ಧರ್ಮಶಾಸ್ತ್ರಗಳು ನಾಲ್ಕುಯುಗಗಳಿಗೂ ಸಂಬಂಧಪಟ್ಟವುಗಳೇ ಅಥವಾ ಯಾವುದಾದರೂ ಒಂದು ಯುಗಕ್ಕೆ ಸಂಬಂಧಪಟ್ಟವುಗಳೇ ಎಂಬುದನ್ನು ವಿಚಾರಮಾಡುವುದಕ್ಕೆ ಮೊದಲು, ಧರ್ಮವೆಂದರೇನು ಎಂಬುದನ್ನು ನಿಶ್ಚಯಿಸಬೇಕಾಗಿದೆ. ಏಕೆಂದರೆ ಇದನ್ನು ತಿಳಿದುಕೊಳ್ಳದೆ ಸಮಯದಲ್ಲಿ ಒದಗಾಯಿಸುವದ

ಗಲಿ ಸಂಶೋಧನ ಮಾಡುವದಾಗಲಿ ಅವಶ್ಯಕವೇ? ಅಲ್ಲವೇ? ಎಂಬುದನ್ನು ತಿಳಿಯಲಾಗುವದಿಲ್ಲ.

ಯಾತರ ಸತ್ತೆಯಿಂದ ಇಂತಹ ಪದಾರ್ಥವೆಂಬ ಅನುಭವವು ಉಂಟಾಗುವದೋ ಅದು ಆ ಪದಾರ್ಥದ ಧರ್ಮವೆನ್ನಿಸಿಕೊಳ್ಳುವದು: ಚೈತನ್ಯವಿದ್ದರೆ ಪ್ರಾಣಿ ಎಂಬ ವ್ಯವಹಾರಕ್ಕೆ ವಿಷಯವಾಗುವದು. ಚೈತನ್ಯವಿಲ್ಲದಿರುವದನ್ನು ಪ್ರಾಣಿ ಎಂದು ಯಾರೂ ಹೇಳುವುದಿಲ್ಲ. ಇದಕ್ಕೆ ಪ್ರಕೃತಿ, ಶಕ್ತಿ, ಭಾವ ಗುಣ,ಧರ್ಮ ಮೊದಲಾಗಿ ಅನೇಕ ಹೆಸರುಂಟು. ಆದುದರಿಂದ ಜಗತ್ತಿನ ಪ್ರಾಣಿಗಳೊಳಗೆ ನಮ್ಮದೇ ಆಗಿರುವ ಅಂತಹ ವಿಶೇಷ ಧರ್ಮವು ನಮ್ಮಲ್ಲಿ ಯಾವದಿರುವದು? ಮತ್ತು ಯಾವದು ನಮ್ಮಲ್ಲಿ ಇಲ್ಲದೆ ಇದ್ದರೆ ನಾವು ಮನುಷ್ಯರೆಂಬ ಹೆಸರಿಗೆ ಯೋಗ್ಯರಾಗದೆ ಹೋಗುವೆವು? ಅಂದರೆ ಅದನ್ನು ಮನುಸ್ಮೃತಿಯಲ್ಲಿ

"ಚತುರ್ಭಿರಪಿಚೈತೈರ್ನಿತ್ಯಮಾಶ್ರಮಿ ಭಿರ್ದ್ವಿಜೈಃ |
ದಶಲಕ್ಷಣಕೋ ಧರ್ಮಸ್ಸೇ-ವಿತವ್ಯಃ ಪ್ರಯತ್ನತಃ ||
ಧೃತಿಃಕ್ಷಮಾದ-ಮೊಸ್ತೇಯಂ ಶೌಚಮಿಂದ್ರಿಯನಿಗ್ರಹಃ |
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂಧರ್ಮಲಕ್ಷಣಮ್" ||

ನಾಲ್ಕು ಆಶ್ರಮಗಳುಳ್ಳ ದ್ವಿಜರುಗಳು ಪ್ರಯತ್ನಪೂರ್ವಕವಾಗಿ ಹತ್ತು ಲಕ್ಷಣಗಳುಳ್ಳ ಧರ್ಮವನ್ನು ನಿತ್ಯವೂ ಸೇವಿಸಬೇಕು. ೧. ಧೃತಿ, ೨. ಕ್ಷಮಾ, ೩. ದಮ. ೪. ಅಸ್ತೇಯ, ೫. ಶೌಚ, ೬. ಇಂದ್ರಿಯ ನಿಗ್ರಹ, ೭ ಧೀ, ೮. ವಿದ್ಯೆ. ೯ ಸತ್ಯ, ೧೦. ಅಕ್ರೋಧ ಇವು ಹತ್ತೂ ಧರ್ಮದ ಲಕ್ಷಣಗಳು.

೧. ನೋಡುವದಕ್ಕೂ ಕೇಳುವದಕ್ಕೂ ಶಕ್ತಿಯು ಪ್ರಾಣಿ ಸಾಮಾನ್ಯಕ್ಕೂ ಉಂಟು. ಎಲ್ಲವೂ ಎಷ್ಟೋ ಪ್ರಕಾಶವಾದ ರೂಪವನ್ನು ನೋಡುವವು. ಎಷ್ಟೋ ವಿಧವಾದ ಶಬ್ದಗಳನ್ನು ಕೇಳುವವು. ಆದರೆ ನೋಡುವದರಿಂದಲೂ ಕೇಳುವದರಿಂದಲೂ ಹೃದಯದಲ್ಲಿ ಅಂಕಿತವಾಗುವ ಸಂಸ್ಕಾರವನ್ನು ಧಾರಣಮಾಡುವ ಶಕ್ತಿಯು ಮಾತ್ರ ಎಲ್ಲ ಪ್ರಾಣಿಗಳಲ್ಲಿಯೂ ಇರುವದಿಲ್ಲ. ಈ ಧಾರಣಾಶಕ್ತಿಯು ಮನುಷ್ಯನೊಬ್ಬನಲ್ಲಿ ಮಾತ್ರ ಅವನ ಸರ್ವಸ್ವವಾಗಿರುವದು. ಆದುದರಿಂದ ಧೃತಿಯು ಮನುಷ್ಯನ ಧರ್ಮವೇ ಆಗಿರುವದು.

೨. ಯಾರ ಮೂಲಕವಾಗಿಯಾದರೂ ತನಗೆ ನೋವು ಉಂಟಾದರೆ ಅದಕ್ಕೆ ಪ್ರತಿಯಾಗಿ ನೋವನ್ನುಂಟುಮಾಡಬೇಕೆಂಬ ಪ್ರವೃತ್ತಿಯು ಪ್ರತಿಯೊಂದು ಪ್ರಾಣಿಗೂ ಉಂಟು. ಇದು ಕೋಪದಿಂದಲೂ, ಮದದಿಂದಲೂ ಉಂಟಾಗುವದು.

ಆದರೆ ಹಾಗೆ ಉಂಟಾಗುವ ಪ್ರತಿಕ್ರಿಯೆಯನ್ನು ಮಾಡಬೇಕೆಂಬ ಪ್ರವೃತ್ತಿಯನ್ನು ತಡೆಯುವ ಶಕ್ತಿಯು ಮನುಷ್ಯನಲ್ಲಿ ಮಾತ್ರವೇ ಇರುವದು. ಆದುದರಿಂದ ಕ್ಷಮೆ ಯು ಮನುಷ್ಯನ ಧರ್ಮವಾಗಿರುವದು.

೩. ಹಸಿವು ಬಾಯಾರಿಕೆಗಳಾದರೆ, ಪ್ರಿಯವಾದ ಪದಾರ್ಥದ ನಾಶವಾಗಲಿ ಅಪ್ರಿಯಪದಾರ್ಥದ ಯೋಗವಾಗಲಿ ಆದರೆ ಪ್ರಾಣಿಸಾಮಾನ್ಯದ ಮನಸ್ಸಿನಲ್ಲಿ ಒಂದು ವಿಧವಾದ ವಿಕಾರವುಂಟಾಗುವದು. ಇದಕ್ಕೆ ಕಾಮವೂ, ಮೋಹವೂ ಕಾರಣಗಳಾಗಿವೆ. ಹಾಗೆ ಒದಗುವ ವಿಕಾರವನ್ನು ತಡೆಯುವ ಶಕ್ತಿಯು ಮನು ಷ್ಯನಲ್ಲಿ ಮಾತ್ರವೇ ಇರುವದರಿಂದ ದಮವೆಂಬುವದು ಮನುಷ್ಯನ ಧರ್ಮವೇ ಆಗಿ ರುವದು.

೪. ಲೋಭದಲ್ಲಿ ಬಿದ್ದು ಅನ್ಯಾಯದಿಂದ ಮತ್ತೊಬ್ಬರ ಪದಾರ್ಥವನ್ನು ತೆಗೆ ದುಕೊಂಡುಬಿಡಬೇಕೆಂಬ ಅಪೇಕ್ಷೆಯು ಪ್ರಾಣಿಸಾಮಾನ್ಯಕ್ಕೂ ಉಂಟಾಗುವದು. ಇದರಿಂದ ಚಿತ್ತದ ಗತಿಯನ್ನು ತಿರುಗಿಸುವ ಶಕ್ತಿಯು ಮನುಷ್ಯನಲ್ಲಿಯೇ ಇರು ವದರಿಂದ ಅಸ್ತೇಯವೆಂಬುವದು ಮನುಷ್ಯನ ಧರ್ಮವಾಗಿರುವದು.

೫. ಶರೀರವನ್ನೂ ಮನಸ್ಸನ್ನೂ ನಿರ್ಮಲವಾಗಿಟ್ಟುಕೊಳ್ಳಬೇಕೆಂಬುವದು ಮನುಷ್ಯನ ಸ್ವಭಾವವಾಗಿರುವದು. ಆದುದರಿಂದ ಶೌಚವು ಮನುಷ್ಯನ ಧರ್ಮವು.

೬. ಒಳಗೆ ಹೊರಗೆ ಸೇರಿ ಮನುಷ್ಯನಿಗೆ ಹನ್ನೊಂದು ಇಂದ್ರಿಯಗಳಿವೆ. ಇಂದ್ರಿಯಗಳೆಲ್ಲವೂ ವಿಷಯಗಳ ಕಡೆಗೆ ಓಡುವದು ಪ್ರತಿಪ್ರಾಣಿಗೂ ಸ್ವಭಾವವಾಗಿ ರುವದು. ಆ ವಿಷಯಾಶಕ್ತಿಯಿಂದ ಇಂದ್ರಿಯಗಳನ್ನು ಹಿಂತಿರುಗಿಸುವ ಶಕ್ತಿ ಯು ಮನುಷ್ಯನಲ್ಲಿಯೇ ಇರುವದರಿಂದ ಇಂದ್ರಿಯನಿಗ್ರಹವು ಮನುಷ್ಯಧರ್ಮವಾ ಗಿರುವದು.

೭. ಪರೀಕ್ಷಿಸಿ ಸಕಲ ವಸ್ತುಗಳ ತತ್ವವನ್ನು ತಿಳಿದುಕೊಳ್ಳುವದಾಗಲಿ ಮೊದ ಲು ಸರಿಯಾದ ರೀತಿಯಿಂದ ಪರೀಕ್ಷಿಸಿ ಯಾವ ವಸ್ತುಗಳ ತತ್ವವನ್ನು ಶಾಸ್ತ್ರವು ಹೇಗೆ ತಿಳಿಸುವದೋ ಅದನ್ನು ಆಲೋಚಿಸಿ ವಸ್ತುತತ್ವಜ್ಞಾನವನ್ನು ಹೊಂದುವ ಶಕ್ತಿಯು ಮನುಷ್ಯನಲ್ಲಿ ಮಾತ್ರವೇ ಇರುವದರಿಂದ ಶಕ್ತಿಯು ಮನುಷ್ಯನ ಧ ರ್ಮವಾಗಿರುವದು.

೮ ಇಂದ್ರಿಯಗಳ ಸಮಷ್ಟಿಯಿಂದಲೇ ದೇಹವು ಉಂಟಾಗಿರುವದು. ಈ ದೇಹದ ಅಸ್ತಿತ್ವಮಾತ್ರದಜ್ಞಾನವು ಕೆಲವು ಪ್ರಾಣಿಗಳಿಗೆ ಇರಬಹುದಾದರೂ ದೇಹಕ್ಕಿಂತಲೂ ಚೈತನ್ಯರೂಪ ಅಂತರಾತ್ಮನೂ ಇಂದ್ರಿಯಗಳೂ ಬೇರೆ ಬೇರೆ

ಯಾದವುಗಳೆಂಬ ಜ್ಞಾನವನ್ನು ಪಡೆಯುವ ಶಕ್ತಿಯು ಮನುಷ್ಯನೊಬ್ಬನಲ್ಲಿಯೇ ಇರುವ ಕಾರಣ ವಿದ್ಯೆಯು ಮನುಷ್ಯನ ಧರ್ಮವಾಗಿರುವದು.

೯ ಸತ್ಯಾಚರಣವು ಸತ್ವಗುಣದಭಾವವಾಗಿರುವದು. ಇದು ಮನುಷ್ಯನಲ್ಲಿಯೇ ಇರುವಕಾರಣ ಸತ್ಯವು ಮನುಷ್ಯನ ಧರ್ಮವೇ ಆಗಿರುವದು.

೧೦ ಪ್ರಾಣಿಮಾತ್ರವೂ ಕೋಪಕ್ಕೆ ಅಧೀನವಾಗಿರುವದು. ಕಾರಣವಿದ್ದರೂ ಕೋಪವನ್ನು ತಡೆಯುವ ಶಕ್ತಿಯು ಮನುಷ್ಯನಲ್ಲಿಯೇ ಕಂಡುಬರುವಕಾರಣ ಅಕ್ರೋಧವು ಮನುಷ್ಯನ ಧರ್ಮವು.

ಇದರಿಂದ ಪ್ರಪಂಚದಲ್ಲಿ ಪ್ರಾಣಿಸಾಮಾನ್ಯದೊಳಗೆ ನಮಗಾಗಿ ನಮ್ಮ ಸರ್ವಸ್ವವಾಗಿ ಧೃತಿಕ್ಷಮಾದಿ ಹತ್ತು ಧರ್ಮಗಳಿವೆ. ಆದರಿಂದಲೇ ನಾವು ಮನುಷ್ಯರಾಗಿರುವೆವು. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಇವುಗಳು ಈ ಹತ್ತುಧರ್ಮಗಳಿಗೆ ವಿರೋಧಿಗಳು. ಅಂದರೆ ಧೃತಿ, ಕ್ಷಮೆ ಮೊದಲಾದ ಧರ್ಮಗಳೆಲ್ಲವೂ ಪ್ರಬಲಗಳಾಗಿದ್ದ ಕಡೆಯಲ್ಲಿ ಕಾಮಕ್ರೋಧಾದಿಗಳು ತಿರಸ್ಕೃತಗಳಾಗುತ್ತವೆ. ತಾತ್ಪರ್ಯವೇನೆಂದರೆ—ಧರ್ಮದ ಧೃತಿಕ್ಷಮಾದಿ ಹತ್ತು ಲಕ್ಷಣಗಳು ಎಲ್ಲಿ ಇರುತ್ತವೆಯೋ ಅಲ್ಲಿ ಕಾಮಕ್ರೋಧಾದಿಗಳು ಅತ್ಯಂತನಿರ್ಜೀವಗಳಾಗಿರುವವು. ಕಾಮಕ್ರೋಧಾದಿ ಶತ್ರುಗಳೇ ಪ್ರಬಲಗಳಾಗಿದ್ದ ಕಡೆಯಲ್ಲಿ ಧೃತಿಕ್ಷಮಾದಿಧರ್ಮಗಳ ಗುರುತು ಸಹ ಇರುವುದಿಲ್ಲ. ಹೀಗೆ ಧರ್ಮಕ್ಕೆ ವಿರೋಧಿಗಳಾದ ಕಾರಣ ಕಾಮಕ್ರೋಧಾದಿಗಳು ಅಧರ್ಮಗಳಾಗಿರುವವು.

ಕಾಮಕ್ರೋಧಾದಿಗಳು ಸಾಧಾರಣವಾಗಿ ಪ್ರಾಣಿಸಾಮಾನ್ಯರಲ್ಲಿಯೂ ಇರುವವು. ಇದರಿಂದ ಇವುಗಳನ್ನು ಪ್ರಾಣಿಧರ್ಮ ಅಥವಾ ಪಶುಧರ್ಮವೆನ್ನುವರು. ಧೃತಿಕ್ಷಮಾದಿಗಳು ಕೇವಲ ಮನುಷ್ಯನ ಸರ್ವಸ್ವವಾಗಿರುವದರಿಂದ ಮನುಷ್ಯಧರ್ಮ ಅಥವಾ ಸಾಮಾನ್ಯಧರ್ಮವೆಂದು ಇವುಗಳನ್ನು ಹೇಳುವರು.

ಮನುಷ್ಯರು ಧರ್ಮದಲ್ಲಿ ಪ್ರಬಲರಾಗಿದ್ದರೆ ಅಲ್ಲಿ ಪಶುಧರ್ಮವು ನಿಸ್ತೇಜವಾಗಿಯೂ ಪಶುಧರ್ಮವೇ ಪ್ರಬಲವಾಗಿದ್ದರೆ ಅಲ್ಲಿ ಮನುಷ್ಯಧರ್ಮವು ನಿಸ್ತೇಜವಾಗಿಯೂ ಇರುವದೆಂಬುದು ನಿಶ್ಚಿತವಾಗುವದು.

ಎತರಿಂದ ಧರ್ಮಕ್ಕೆ ಉನ್ನತಿಯೋ ಅದರಿಂದ ಮನುಷ್ಯತ್ವದ ಉನ್ನತಿಯೂ ಎತರಿಂದ ಧರ್ಮಕ್ಕೆ ಅವನತಿಯೋ ಅಂದರೆ ಪಶುಧರ್ಮ ಅಥವಾ ಅಧರ್ಮವೃದ್ಧಿಯೋ ಅದರಿಂದ ಮನುಷ್ಯನ ಅವನತಿಯೂ ಕೊನೆಗೆ ಪಶುತ್ವವೂ ಪ್ರಾಪ್ತವಾಗುವದರಿಂದ ಧರ್ಮೋನ್ನತಿಯೊಂದಿಗೆ ಮನುಷ್ಯನ ಉನ್ನತಿಯೂ ಅಧರ್ಮವೃದ್ಧಿಯೊಂದಿಗೆ ಮನುಷ್ಯನ ಅವನತಿಯೂ ಪಶುತ್ವವೃದ್ಧಿಯೂ ಆಗುವದೆಂಬುವದು ಸ್ಪಷ್ಟಪಡುವದು.

ಧರ್ಮಾಚರಣವೇ ನಮ್ಮ ಉನ್ನತಿಗೆ ಕಾರಣವೆಂಬುವದೂ ಅದಿದ್ದರೇನೇ ನಾವು ಮನುಷ್ಯರೆಂದು ಪರಿಚಯವನ್ನು ಕೊಡಬಲ್ಲೆವು ಎಂಬುವದೂ ಸಹ ಇದರಿಂದ ನಿರ್ವಿವಾದವಾಗಿ ಸಿದ್ಧವಾಗುವದು. ಹಾರೀತಸ್ಮೃತಿಯಲ್ಲಿ "ಧರ್ಮಃ ಶ್ರೇಯಸ್ಸಮುದ್ದಿಷ್ಟಂ ಶ್ರೇಯೋಭ್ಯುದಯ ಲಕ್ಷಣಂ" ಏತರಿಂದ ಉನ್ನತಿಯೋ ಅದೇ ಶ್ರೇಯಸ್ಸು ಎಂತಲೂ ಈ ಶ್ರೇಯಸ್ಸು ಏತರಿಂದ ಸಾಧಿಸಲ್ಪಡುವದೋ ಅದೇ ಧರ್ಮವೆಂತಲೂ ಹೇಳಿದುವರು. ಮಹಾತ್ಮರಾದ ಹಾರೀತರವಚನವು ಮೇಲೆ ಹೇಳಿದ ವಚನವನ್ನು ಸ್ಥಿರಪಡಿಸುವದು.

ಇದರಿಂದ ಧರ್ಮದ ಸ್ವರೂಪವೂ, ಧರ್ಮಾಚರಣದ ಆವಶ್ಯಕತೆಯೂ, ಧರ್ಮವು ಕ್ಷೀಣವಾದರೆ ಅಧರ್ಮವು ವೃದ್ಧಿಯಾಗಿ ಅದರೊಂದಿಗೆ ನಾವು ನಮ್ಮ ಮನುಷ್ಯತ್ವವನ್ನು ಕೈಯಿಂದ ಕಳೆದುಕೊಂಡು ಕ್ರಮಕ್ರಮವಾಗಿ ಪಶುಸಮಾನರಾಗಿ ಅಧೋಗತಿಯನ್ನು ಹೊಂದುವೆವೆಂಬುವದೂ ಸಿದ್ಧವಾದವೇಲೆ ನಮ್ಮ ಧರ್ಮದ ಬಲವನ್ನು ಕ್ರಮಕ್ರಮವಾಗಿ ಹೆಚ್ಚಿಸಬೇಕೆಂಬುದನ್ನೂ ಪಶುಸಮಾನರನ್ನಾಗಿ ಮಾಡುವ ನೀಚ ಪ್ರವೃತ್ತಿಯನ್ನು ಪರಿಹರಿಸಿಕೊಳ್ಳುವದರಲ್ಲಿ ಸದಾ ಪ್ರಯತ್ನಶೀಲರಾಗಿರಬೇಕೆಂಬುವದನ್ನೂ ಸಹ ಹೇಳಬೇಕಾಗಿಯೇ ಇಲ್ಲ.

ಕೃತಯುಗದಲ್ಲಿ ಮನುಷ್ಯತ್ವವನ್ನು ಪಡೆಯುವದಕ್ಕೆ ಪ್ರಯತ್ನಿಸಬೇಕು. ತ್ರೇತಾಯುಗವೇ ಮೊದಲಾದವುಗಳಲ್ಲಿ ನೀಚಪ್ರವೃತ್ತಿಗೆ ಅವಲಂಬನವಾದ ಕರ್ಮಗಳನ್ನು ಆಚರಿಸಿ ಕ್ರಮಕ್ರಮವಾಗಿ ಕಲಿಯುಗದಲ್ಲಿ ಅಧೋಗತಿಯನ್ನು ಹೊಂದಿ ಪಶುಸಮಾನರಾಗಬೇಕು, ಎಂಬುವದು ಎಂದಿಗೂ ಸರಿಯಾದುದಲ್ಲ. ಹೀಗೆ ನೋಡಿಯೂ, ಕೇಳಿಯೂ, ಮನುಷ್ಯನು ನೀಚವೃತ್ತಿಯಲ್ಲಿಯೇ ತತ್ಪರನಾಗುವದಾದರೆ ಅವನಿಗೆ ಅಧಃಪತನವು ಖಂಡಿತವಾಗಿಯೂ ಆಗುವದು. ಕಾಲದೋಷವಾಗಲಿ ಗುಣವಾಗಲಿ ಇದರಲ್ಲಿ ಯಾವದೂ ಇರುವದಿಲ್ಲ. ಅದು ನಮ್ಮ ಕರ್ಮದ ಫಲವೇಸರಿ. ಯಾವಯುಗದ ಯಾವ ದೋಷವೂ ಅಲ್ಲವು. ಕಾಲವು ಅನಂತವಾದುದು. ಅದರಲ್ಲಿ ಕೃತ ತ್ರೇತಾದಿ ಯುಗಗಳೆಲ್ಲವೂ ಬರುತ್ತವೆ ಹೋಗುತ್ತವೆ, ಕಾಲದಲ್ಲಿ ವ್ಯತ್ಯಾಸವೇನೂ ಇರುವದಿಲ್ಲ. ಅದರಲ್ಲಿ ವೃದ್ಧಿಯಾಗಲಿ ಹ್ರಾಸವಾಗಲಿ ಇರುವದಿಲ್ಲ. ಏಕೆಂದರೆ ಅದು ಅನಂತವಾದುದು. ನಾವು ಮಾಡಿದ ಕರ್ಮದ ಫಲವು ನದಿಯಂತೆ ಅವಿಚ್ಛಿನ್ನವಾಗಿ ಒಂದೇ ರೂಪದಿಂದ ಎಲ್ಲಿಯವರೆಗೆ ಹರಿಯುತ್ತಿರುವದೋ ಅಲ್ಲಿಯವರೆಗೆ ನಾವು ಅದನ್ನು ಒಂದು ಯುಗವೆಂದು ಹೇಳುವೆವು. ಆಕರ್ಮಫಲಪ್ರವಾಹದಲ್ಲಿ ಹೆಚ್ಚುಕಡಮೆಗಳಾಗುವದನ್ನು ಅನುಸರಿಸಿ ಕೃತಯುಗವೆಂ

ತಲೂ ತ್ರೇತಾಯುಗವೆಂತಲೂ, ದ್ವಾಪರಯುಗವೆಂತಲೂ, ಕಲಿಯುಗವೆಂತಲೂ ಭೇದವನ್ನು ನಾವೇ ಮಾಡಿಕೊಳ್ಳುವೆವು. ಈ ರಚನೆಯ ಭಾರವೆಲ್ಲವೂ ಮನುಷ್ಯ ಸಮಾಜದ ಕೈಯ್ಯಲ್ಲಿಯೇ ಇರುವದು. ಈ ಮನುಷ್ಯ ಸಮಾಜವು ಇಷ್ಟ ಪಟ್ಟು ಸೊಂಟಕಟ್ಟಿ ನಿಲ್ಲುವದಾದರೆ ಕಲಿಯುಗದ ವೃದ್ಧಿಯನ್ನು ತಡೆದು ನಿಲ್ಲಿಸಿ ಕೃತಯುಗದ ದಾರಿಯಲ್ಲಿ ಮುಂದೆಮುಂದೆ ಹೆಜ್ಜ ಬಲ್ಲದು. ಹಾಗೆಯೇ ಇಷ್ಟ ಪಟ್ಟರೆ ಅತ್ಯಲ್ಪಕಾಲದಲ್ಲಿ ಕಲಿಯುಗದ ಮಧ್ಯಾಹ್ನ ಸೂರ್ಯನ ಪ್ರಖರಕಿರಣಗಳನ್ನು ನೋಡಬಲ್ಲದು.

ಇದಕ್ಕೆ ಕಾಲವು ಕಾರಣವಲ್ಲ. ಇದು ಮನುಷ್ಯಸಮಾಜಕ್ಕೆ ಅಧೀನ ವಾಗಿರುವದು. ಆದರೆ ಯಾರು ಈ ಸಮಾಜದಲ್ಲಿ ಪ್ರಮುಖರಾಗಿ ನಿಲ್ಲುವರೋ ಅವರು ಸಮಾಜದ ಪ್ರಧಾನವಾದ ಅಂಗವೆನಿಸುವರು. ಉಳಿದವರು ಮುಖ್ಯಮ ನುಷ್ಯರು ನಡೆದಂತೆ ನಡಿಯುವರು. ಆದುದರಿಂದ ಈ ಪ್ರಮುಖರು ತಮ್ಮ ಕರ್ತ ವ್ಯವನ್ನು ತಿಳಿದುಕೊಳ್ಳದೆ ಮನುಷ್ಯಸಮಾಜದಲ್ಲಿ ನೀಚಪ್ರವೃತ್ತಿಯ ಮಾರ್ಗದ ಬಾಗಿ ಲನ್ನು ತೆರೆದುಬಿಡುವುದಾದರೆ ಪರಿಣಾಮದಲ್ಲಿ ಅದರ ಫಲವು ದೊರೆತಮೇಲೆ ಮನು ಷ್ಯಸಮಾಜವು ಕ್ರಮಕ್ರಮವಾಗಿ ಅಧೋಗತಿಯನ್ನು ಹೊಂದಿದಾಗ ಆ ದೋಷಕ್ಕೆ ಪ್ರಮುಖರಾದವರೇ ಭಾಗಿಗಳಾಗಬೇಕಾಗುವದು. ಆದುದರಿಂದ ಮನುಷ್ಯರಿಗೆ ಆವಶ್ಯಕಗಳಾದ ಆಚಾರ ಆಹಾರ ವ್ಯವಹಾರ ಮೊದಲಾದವುಗಳಲ್ಲಿ ನೀಚಪ್ರವೃತ್ತಿ ಗಳಿಲ್ಲದೆಉತ್ತಮ ಪ್ರವೃತ್ತಿಗಳು ಹೆಚ್ಚಿ ಉನ್ನತಿಯುಂಟಾಗುವ ಕಾರ್ಯಗಳನ್ನೇ ಪ್ರತಿ ಸಮಯದಲ್ಲಿಯೂ ಪ್ರತಿಯುಗದಲ್ಲಿಯೂ ಮಾಡಬೇಕಾದುದು ಅವಶ್ಯಕವು.

ಯಾವ ಆಚಾರದಿಂದ ಕೃತಯುಗದಲ್ಲಿ ಉನ್ನತಿಯು ಉಂಟಾಗುತ್ತಿದ್ದಿತೋ ಅದೇ ಆಚಾರದಿಂದ ಇತರ ಯುಗಗಳಲ್ಲಿ ಅಧೋಗತಿಯುಂಟಾಗುವದೆಂತಲೂ ಯಾ ವ ಆಚಾರವು ಕೃತಯುಗದಲ್ಲಿ ಅಧೋಗತಿಯನ್ನುಂಟುಮಾಡುತ್ತಿದ್ದಿತೋ ಅದು ಇತ ರ ಯುಗಗಳಲ್ಲಿ ಉನ್ನತಿಯನ್ನುಂಟುಮಾಡುವದೆಂತಲೂ ಹೇಳಿದರೆ ಇದು ಯುಕ್ತಿ ವಿರುದ್ಧವಾಗಿ ಕೇವಲ ಪ್ರಲಾಪವೆನ್ನಿಸುವದು. ಎಂತಹ ಆಚಾರದಿಂದಲೂ ವ್ಯವ ಹಾರದಿಂದಲೂ ಮನುಷ್ಯನು ತನ್ನ ಉತ್ತಮ ಪ್ರವೃತ್ತಿಗಳನ್ನು ಪ್ರಬಲ ಮಾಡಿಕೊಳ್ಳ ಬಲ್ಲನೋ ಎಂತಹ ವ್ಯವಹಾರದಿಂದ ಅಧೋಗತಿಯುಂಟಾಗುವ ನೀಚಪ್ರವೃತ್ತಿಗಳು ಮನುಷ್ಯನಲ್ಲಿ ಹೆಚ್ಚುವವೋ ಅವುಗಳ ರೀತಿಯನ್ನು ಶಾಸ್ತ್ರಕಾರರು ತೋರಿಸಿ ಮನು ಷ್ಯರಿಗೆ ಕಲ್ಯಾಣಕರವಾದ ಆಚಾರವನ್ನು ಉಪದೇಶಿಸಿ ಇರುವರು. ಮತ್ತು ಅದರ ಪ್ರಶಂಸೆಯನ್ನೂ ಮಾಡಿರುವರು. ಹಾಗೆಯೇ ಯಾವ ಆಚಾರದಿಂದ ಅಧೋಗತಿ

ಯುಂಟಾಗುವದೋ ಅದರ ನಿಷೇಧವನ್ನೂ ನಿಂದೆಯನ್ನೂ ಮಾಡಿರುವರು. ಇದಕ್ಕಾಗಿಯೇ ಧರ್ಮಶಾಸ್ತ್ರವು ಹುಟ್ಟಿರುವದು.

ಮನುಷ್ಯರೆಲ್ಲರೂ ಸ್ವಭಾವದಿಂದಲೇ ಉತ್ತಮ ಪ್ರವೃತ್ತಿಯುಳ್ಳವರಾಗಿದ್ದರೆ ಧರ್ಮಶಾಸ್ತ್ರದಲ್ಲಿ ಹೇಳಿರುವ ಸರ್ವವಿಧಿಗಳನ್ನೂ ಪಾಲಿಸಬಲ್ಲರು. ಅಲ್ಲದೆ ಹಾಗೆ ಮಾಡುವದಕ್ಕೆ ತಾವೇ ಪ್ರವರ್ತಿಸುವರು.

ನೀಚಪ್ರವೃತ್ತಿಯ ಪ್ರಭುತ್ವವು ಮನುಷ್ಯನಲ್ಲಿ ಹೆಚ್ಚಿದರೆ ಧರ್ಮಶಕ್ತಿಯ ಬಲವು ಕಡಮೆಯಾಗುವದಲ್ಲದೆ ಜನಗಳು ಶಾಸ್ತ್ರದಲ್ಲಿ ವಿಧಿಸಿರುವ ಆಚಾರಗಳನ್ನು ಪೂರ್ಣರೀತಿಯಿಂದ ಅನುಷ್ಠಿಸುವದಕ್ಕೆ ಅಸಮರ್ಥರಾಗುವರು. ಅಂತಹ ಸ್ಥಿತಿಯಲ್ಲಿ ಯಾವ ಆಚಾರವನ್ನು ಜನಗಳು ಸಾಧಿಸಲಾರರೋ ಅದನ್ನು ಬಿಟ್ಟು ಆ ಸಮಯಕ್ಕೆ ಉಪಯುಕ್ತವಾದ ಮತ್ತು ಸುಲಭವಾದ ಆಚಾರವನ್ನು ಆಚರಿಸುವದಕ್ಕೆ ಆರಂಭಿಸುವರು. ಇಂತಹ ಸಂದರ್ಭದಲ್ಲಿ ಮನುಷ್ಯಸಮಾಜದ ಸ್ಥಿತಿಯನ್ನು ಪರಿಶೀಲಿಸಿ ಶಾಸ್ತ್ರದಲ್ಲಿ ಹೇಳಿರುವ ಕರ್ಮಗಳೊಳಗೆ ಯಾವದು ಸುಲಭ ಸಾಧ್ಯವೋ ಯಾತರ ಅನುಷ್ಠಾನದಿಂದ ಕ್ರಮಕ್ರಮವಾಗಿ ಉತ್ತಮಪ್ರವೃತ್ತಿಗಳಿಗೆ ಹೆಚ್ಚುವ ಆಶೆಯುಂಟೋ ಅವುಗಳನ್ನು ವ್ಯವಸ್ಥೆಪಡಿಸುವದು ಸಮಾಜಸುಧಾರಕರ ಅವಶ್ಯಕರ್ತವ್ಯವಾಗಿರುವದು.

ಆದರೆ ಹಾಗೆ ಮಾಡದೆ ಎಷ್ಟೋ ಜನಗಳು ನೀಚಕರ್ಮಗಳ ಪ್ರವಾಹವನ್ನು ಮನುಷ್ಯಸಮಾಜದಲ್ಲಿ ವೇಗದಿಂದ ಪ್ರವಹಿಸುವಂತೆ ಮಾಡಿ ಧಾರ್ಮಿಕ ಕರ್ಮಬಲಕ್ಕೆ ಕ್ಷೀಣತೆಯನ್ನು ಉಂಟುಮಾಡುತಲಿಧಾರೆ. ಹೀಗಾಗುವುದರಿಂದ ಶಾಸ್ತ್ರನಿಂದಿತ ಕರ್ಮಗಳನ್ನಾಚರಿಸಿ ಅಧೋಗತಿಯನ್ನು ಶೀಘ್ರವಾಗಿಯೂ ಉಂಟುಮಾಡುವಕ್ಕೆ ಸಹಾಯಕರಾಗುತಲಿಧಾರೆ. ವೈದ್ಯನೆಂದು ಹೇಳಿಕೊಂಡು ರೋಗಿಗಳ ಪ್ರಾಣಹರಣ ಮಾಡಿದರೆ ಉಂಟಾಗುವ ಪಾತಕಕ್ಕಿಂತಲೂ ಹೀಗೆ ಮಾಡುವ ಸಮಾಜ ಪ್ರಮುಖರಿಗೆ ಹೆಚ್ಚು ಪಾತಕವು ಸಂಭವಿಸುವದರಲ್ಲಿ ಅಭ್ಯಂತರವಿಲ್ಲವು. ಶರೀರವು ಸ್ವಸ್ಥವಾಗಿರುವಾಗ ಅಪಥ್ಯವಾದಾಗ್ಯೂ ಸಹಿಸಿಕೊಳ್ಳಬಹುದು. ಶರೀರವು ಸ್ವಸ್ಥವಾಗಿಲ್ಲದಿರುವಾಗ ಅಪಥ್ಯವನ್ನು ಮಾಡಿದರೆ ಆದರಿಂದ ಉಂಟಾಗುವ ಹಾನಿಯು ಎಷ್ಟೆಂಬುವದನ್ನು ಹೇಳಬೇಕಾಗಿಯೇ ಇಲ್ಲವು. ಈಗಿನ ಜನಗಳ ಚಿತ್ತವೃತ್ತಿಯನ್ನು ನೋಡಿದರೆ ವೈದಿಕಾಚಾರದಲ್ಲಿ ದ್ವೇಷವೂ ಪಾಶ್ಚಾತ್ಯರ ಆಚರಣೆಯಲ್ಲಿ ಆದರದ ಲಕ್ಷಣವೂ ಕಂಡುಬರುತಲಿದೆ. ಈ ಸ್ಥಿತಿಯನ್ನು ತಿರುಗಿಸಿ ಪುನಃ ಜನಗಳ ಮನಸ್ಸಿನಲ್ಲಿ ವೈದಿಕಧರ್ಮದ ಶ್ರದ್ಧೆಯನ್ನು ಉಂಟುಮಾಡುವುದಕ್ಕಾಗಿ ಭಾರತಧರ್ಮ ಮಹಾಮಂಡಲದ ಸಂಬಂಧದಲ್ಲಿ ಶ್ರೀಮಾನ್ ವ್ಯಾಖ್ಯಾನವಾಚಸ್ಪತಿ ಪಂ

ಡಿತ ದೀನದಯಾಲುಜಿಯವರೂ, ವಿದ್ಯಾವಾಗೀಶ ಪಂ|| ಗೋವಿಂದರಾಮಶಾಸ್ತ್ರಿಗಳೂ, ವಿದ್ಯಾವಾರಿಧಿ ಪಂ|| ಜ್ವಾಲಾಪ್ರಸಾದ ಮಿಶ್ರರೂ, ವಿದ್ಯಾಸಾಗರ ಪಂ|| ಬುಲಾಕೀ ರಾಮಶಾಸ್ತ್ರಿಗಳೂ, ವಾಣೀಭೂಷಣ ಪಂ|| ನಂದಕಿಶೋರಶುಕ್ಲರೂ, ಇವರೇ ಮೊದಲಾದ ಮಹಾಶಯರು ಧರ್ಮಪ್ರಚಾರವನ್ನು ಮಾಡುತ್ತಿರುವರು. ಇದರಿಂದ ಇವರನ್ನು ವರ್ತಮಾನಧರ್ಮಪ್ರಚಾರಕರೆಂದು ಹೇಳಬಹುದು. ಆದರೆ ಇವರು ಕಲಿಯುಗದಲ್ಲಿ ಧರ್ಮಪ್ರಚಾರವನ್ನು ಮಾಡುವರೆಂದರೆ ಇವರು ಕಲಿಯುಗಕ್ಕಾಗಿ ಹೊಸ ಧರ್ಮವನ್ನು ಕಲ್ಪಿಸುವರೆಂದು ತಿಳಿಯಬಹುದೇ ? ಹಾಗೆ ಇವರು ತಾವಾಗಿಯೇ ಒಂದು ಹೊಸ ಧರ್ಮವನ್ನು ಪ್ರಚಾರಪಡಿಸುವದಾದರೆ ವೈದಿಕ ಸನಾತನ ಧರ್ಮಾವಲಂಬಿಗಳು ಇವರ ಮಾತನ್ನು ಒಪ್ಪುವರೆ ? ಇವರಿಗೆ ಜನಗಳಲ್ಲಿ ಪ್ರತಿಷ್ಠೆಯು ದೊರಕುವದೇ ? ಎಂದಿಗೂ ಹಾಗಾಗುವದಿಲ್ಲ. ಇವರು ಮಾಡುವ ಉಪದೇಶವು ವೇದಸಮ್ಮತವಾದುದು. ಪೂರ್ವಕಾಲದ ಮಹರ್ಷಿಗಳೂ ಇದೇ ರೀತಿಯಲ್ಲಿ ವೇದದ ಸ್ಮರಣವನ್ನು ಮಾಡಿಕೊಂಡು ಧರ್ಮೋಪದೇಶವನ್ನು ಮಾಡಿರುವರು. ಇವರು ಕಲಿಯುಗಕ್ಕಾಗಿ ಏನನ್ನು ಹೇಳಿರುವರೋ ಅದನ್ನೇ ಕೃತತ್ರೇತಾದ್ವಾಪರಗಳ ಋಷಿಗಳೂ ಉಪದೇಶಿಸುತ್ತಿದ್ದರು. ಕೃತತ್ರೇತಾದ್ವಾಪರಗಳಲ್ಲಿ ವಿಹಿತವಾದುದೇ ಕಲಿಯುಗದಲ್ಲಿಯೂ ವಿಹಿತವಾಗಿರುವದು. ಹಿಂದೆ ನಿಂದಿತವಾದದ್ದು ಈಗಲೂ ನಿಂದಿತವೇ ಆಗಿರುವದು. ಕಷ್ಟಕಾಲದಲ್ಲಿ ಮಾತ್ರ ವಿಹಿತವಾಗಿರುವ ಧರ್ಮಕಾರ್ಯಗಳಲ್ಲಿ ಕೆಲವು ಕಠಿನಭಾಗಗಳನ್ನು ಬಿಡಬಹುದು. ಆದಮಾತ್ರದಿಂದ ವಿಹಿತವಲ್ಲದುದನ್ನು ವಿಹಿತವೆಂದು ಹೇಳುವದು ಸರಿಯಲ್ಲ. ಹಾಗೆ ಎಲ್ಲಾ ಕಾಲಕ್ಕೂ ಧರ್ಮವೊಂದೇ ಆದರೆ ಇಷ್ಟು ಧರ್ಮಶಾಸ್ತ್ರಗಳು ಏಕೆಹುಟ್ಟಿದವು? ಒಂದೇ ಸ್ಮೃತಿಯೇ ಸಾಕಾಗಿರುತ್ತಿತ್ತಲ್ಲವೇ ? ಎಂದು ಆಕ್ಷೇಪಿಸಬಹುದು.— ಪೂರ್ವದಲ್ಲಿ ಧರ್ಮಶಾಸ್ತ್ರೋಪದೇಶಕರೆಲ್ಲರೂ ವೇದದ ವಿಚಾರವನ್ನು ನೆನಪಿಗೆತಂದುಕೊಂಡು ಧರ್ಮಜಿಜ್ಞಾಸುಗಳಿಗೆ ಬಾಯಿಯಿಂದಲೇ ಉಪದೇಶವನ್ನು ಮಾಡುತ್ತಿದ್ದರು. ಶ್ರೋತೃಜನಗಳು ಧರ್ಮೋಪದೇಶವನ್ನು ಕೇಳಿ ತಮ್ಮ ತಮ್ಮ ಸಂಪ್ರದಾಯದಲ್ಲಿ ಅದನ್ನು ಪ್ರಚಾರಕ್ಕೆ ತರುತ್ತಿದ್ದರು. ಧರ್ಮೋಪದೇಶವು ಮರೆತುಹೋಗಿ ಆಚಾರದಲ್ಲಿ ವ್ಯತ್ಯಾಸವುಂಟಾದಕಾಲದಲ್ಲಿ ಅಥವಾ ಧರ್ಮದ ಯಾವುದಾದರೂ ಒಂದು ಭಾಗದಲ್ಲಿ ಯಾರಿಗಾದರೂ ವಿಚಾರಮಾಡಬೇಕಾದ ಅವಶ್ಯಕತೆಯುಂಟಾದ ಕಾಲದಲ್ಲಿ ಪೂರ್ಣವಾಗಿ ವೇದವೇತ್ತೃಗಳ ಸಮೀಪಕ್ಕೆ ಹೋಗಿ ಧರ್ಮಪ್ರಶ್ನೆಯನ್ನು ಮಾಡುತ್ತಿದ್ದರು.

ಹಾಗೆಯೇ ಧರ್ಮೋಪದೇಶಕರು ಅವರಿಗೆ ಉಪದೇಶವನ್ನು ಮಾಡುತ್ತಿದ್ದರು. ಆ ಉಪದೇಶಕರನ್ನೇ ಧರ್ಮಶಾಸ್ತ್ರಕಾರರೆಂದು ಹೇಳುತ್ತಿದ್ದರು. ಏಕೆಂದರೆ ಅವರೇನೇ ಮನುಷ್ಯರಿಗೆ ಧರ್ಮದ ಸ್ಮರಣೆಯನ್ನು ಉಂಟುಮಾಡಿ ವಿಚ್ಛಿನ್ನವಾಗಿದ್ದ ಧರ್ಮಸೂತ್ರವನ್ನು ಕೇರಿಸುತ್ತಿದ್ದರು. ಆದುದರಿಂದ ಸ್ಮೃತಿಕಾರರೆಂದು ಹೇಳಿಸಿಕೊಳ್ಳುತ್ತಿದ್ದರು.

ಶಾಸ್ತ್ರಕಾರರಾದ ಮಹರ್ಷಿಗಳು ಧರ್ಮವನ್ನು ಸ್ಮರಣೆಗೆ ತರುತಿದ್ದರು. ತಾವು ಸ್ವಯಂ ಯಾವದನ್ನೂ ರಚನೆಮಾಡಲಿಲ್ಲ. ವೇದದಲ್ಲಿ ಹೇಗೆ ಆಚರಿಸಬೇಕೆಂದು ಹೇಳಿರುವದೋ ಆ ಧರ್ಮವನ್ನೇ ಪರೋಪಕಾರದೃಷ್ಟಿಯಿಂದ ಜನಗಳ ನೆನಪಿಗೆ ತರುತ್ತಿದ್ದರು. ವೇದದ ಅರ್ಥವೂ, ವೇದದ ಉಪದೇಶವೂ, ಸರ್ವಕಾಲಕ್ಕೂ ಸಮಾನವಾದುದು. ಯಾವುದಾದರೂ ಒಂದು ಯುಗಕ್ಕಾಗಿ ಅಲ್ಲ. ಧರ್ಮೋಪದೇಶಕರಾದ ಯಾವ ಋಷಿಗಳೂ ಇದುವರಿಗೂ ಈ ವಿಧವಾಗಿ ಹೇಳಿರುವದಿಲ್ಲ.

ಮನುಮೇಕಾಗ್ರಮಾಸೀನಮಭಿಗಮ್ಯಮಹರ್ಷಯಃ |
ಪ್ರತಿಪೂಜ್ಯಯಥಾನ್ಯಾಯಮಿದಂವಚನಮಬ್ರುವನ್ ||
ಭಗವನ್ಸರ್ವವರ್ಣಾನಾಂಯಥಾವದನುಪೂರ್ವಶಃ |
ಅಂತರಪ್ರಭವಾನಾಂಚಧರ್ಮಾನ್ನೋವಕ್ತುಮರ್ಹಸಿ ||
ತ್ವಮೇಕೋಹ್ಯಸ್ಯಸರ್ವಸ್ಯವಿಧಾನಸ್ಯಸ್ವಯಂಭುವಃ |
ಅಚಿಂತ್ಯಸ್ಯಾಪ್ರಮೇಯಸ್ಯಕಾರ್ಯತತ್ವಾರ್ಥವಿತ್ಪ್ರಭೋ ||
ಸತೈಃಪೃಷ್ಟಸ್ತಥಾಸಮ್ಯಗಮಿತೌಜಾಮಹಾತ್ಮಭಿಃ |
ಪ್ರತ್ಯುವಾಚಾರ್ಚ್ಯತಾನ್ಸರ್ವಾನ್ಮಹರ್ಷೀನ್ಶ್ರೂಯತಾಮಿತಿ ||

ಭಗವಾನ್ಮನುವು ಧ್ಯಾನಪರಾಯಣನಾಗಿ ಏಕಾಗ್ರಚಿತ್ತದಿಂದ ಆಸನದಲ್ಲಿ ಕುಳಿತಿರುವಾಗ ಧರ್ಮಜಿಜ್ಞಾಸುಗಳಾದ ಮಹರ್ಷಿಗಳು ಬಂದು ಯಥೋಚಿತಪೂಜನವಂದನಾದಿಗಳನ್ನು ಮಾಡಿ, ಭಗವನ್ ! ನಾಲ್ಕುವರ್ಣದವರ ಮತ್ತು ವರ್ಣಸಂಕರಜಾತಿಯವರ ಸಕಲ ಧರ್ಮಗಳನ್ನೂ ನಮಗೆ ತಿಳಿಸಬೇಕು. ಅನೇಕ ಶಾಖೆಗಳಲ್ಲಿ ವಿಭಕ್ತಗಳಾಗಿ ಎಲ್ಲಿಯೇ ಇಲ್ಲದಂತೆ ಕಂಡುಬರುವ, ಮೀಮಾಂಸಾನ್ಯಾಯ ಮೊದಲಾದವುಗಳ ಸಹಾಯವಿಲ್ಲದೆ ತಿಳಿಯುವದಕ್ಕಾಗದ, ಅಲೌಕಿಕವಾಗಿಯೂ ನಿತ್ಯವಾಗಿಯೂ ಇರುವ, ವೇದದಲ್ಲಿ ವರ್ಣಿತವಾಗಿರುವ ಯಾಗ ಮೊದಲುಗೊಂಡು ಬ್ರಹ್ಮತತ್ವವನ್ನೂ ಸಹ ನೀನೇ ತಿಳಿದಿರುವಿ,—ಹೀಗೆ ಮಹರ್ಷಿಗಳು ಪ್ರಶ್ನೆ ಮಾಡಲಾಗಿ

ಪರಮತೇಜಸ್ವಿಯಾದ ಮನುವು ಪರಮಾದರದಿಂದ ಉತ್ತರಕೊಟ್ಟನು. ಇದೇ ಪ್ರಕಾರವಾಗಿ ಲಘು ಅತ್ರಿಸಂಹಿತೆ, ವಿಷ್ಣುಸ್ಮೃತಿ, ಹಾರೀತಸಂಹಿತೆ, ವ್ಯಾಸಸ್ಮೃತಿ ಶಂಖಸಂಹಿತೆ, ಗೋತಮಸಂಹಿತೆ, ವೃದ್ಧಗೋತಮಸಂಹಿತೆ, ವಸಿಷ್ಠಸಂಹಿತೆ, ಮೊದ ಲಾದವುಗಳಲ್ಲಿಯೂ, ಪ್ರಾರಂಭದಲ್ಲಿಯೇ ಗ್ರಂಥರಚನೆಯ ಕಾರಣವನ್ನು ಬರೆ ರುವರು. ಯಾರೂ ಯಾವದಾದರೂ ಒಂದು ಯುಗಕ್ಕಾಗಿ ಧರ್ಮವನ್ನು ವಿ ರಿಸಿಲ್ಲ. ಭಗವಾನ್ ಮನುವೂ ಸಹ ಮಹರ್ಷಿಗಳ ಪ್ರಶ್ನೆಗೆ ನಾಲ್ಕುವರ್ಣಗ ರೀತಿಯನ್ನೂ, ಪಾತಕಿಗಳು ಶುದ್ಧರಾಗುವ ರೀತಿಯನ್ನೂ ಹೇಳಿರುವನು. ಅದರಲ್ಲಿ ಯೂ ಎಲ್ಲಿಯೂ ಯಾವ ಯುಗದ ಹೆಸರನ್ನೂ ಹೇಳಿಇಲ್ಲ. ಸರ್ವಜನಹಿತಾರ್ಥ ವಾಗಿ ಧರ್ಮಲಕ್ಷಣವನ್ನೂ ವೇದವಿಹಿತಕಾರ್ಯವನ್ನೂ ಉಪದೇಶಮಾಡಿರುವನು. ಹೀಗೆ ಯಾವ ಧರ್ಮಶಾಸ್ತ್ರದಲ್ಲಿಯೂ, ಯಾವ ಸ್ಮೃತಿಕಾರರೂ, ಯಾವ ವಿಶೇಷ ಕಾಲಕ್ಕೂ, ಉಪದೇಶಮಾಡಿಇಲ್ಲ. ಯಾವದಾದರೂ ಧರ್ಮಶಾಸ್ತ್ರವು ಯಾವ ದಾದರೂ ಒಂದು ವಿಶೇಷ ಕಲ್ಪಕ್ಕಾಗಿ ಇರುವ ಪಕ್ಷದಲ್ಲಿ ಅವಶ್ಯವಾಗಿಯೂ ಯಾವದಾದರೂ ಒಂದು ಪ್ರಸಂಗದಲ್ಲಿ ಯಾವದಾದರೂ ಒಂದು ಧರ್ಮಶಾಸ್ತ್ರದಲ್ಲಿ ಒಬ್ಬನ ಮುಖದಿಂದಲಾದರೂ ಈಮಾತು ಹೊರಪಡಿಸುತ್ತಿತ್ತು.

ಧರ್ಮಶಾಸ್ತ್ರದ ಯಾವುದಾದರೂ ವಿಷಯವನ್ನು ವಿಚಾರಮಾಡಬೇಕಾದ ಸಮಯವು ಒದಗಿದಾಗ ಎಲ್ಲಾ ಶಾಸ್ತ್ರಗಳ ಏಕವಾಕ್ಯತೆಯನ್ನು ಮಾಡಿಕೊಂಡು ಸಿದ್ಧಾಂತಮಾಡುವ ರೀತಿಯು ಬಹುಕಾಲದಿಂದಲೂ ನಡೆದುಬರುತಲಿದೆ. ಇದ ರಿಂದ ಇದುವರಿಗೆ ಧರ್ಮಶಾಸ್ತ್ರದ ವಿಷಯದಲ್ಲಿ ಪಂಡಿತರುಗಳು ಹೇಗೆ ಅಭಿಪ್ರಾ ಯವುಳ್ಳವರಾಗಿದ್ದರೆಂಬುವದು ಸ್ಪಷ್ಟಪಡುವದು. ಸರ್ವಸ್ಮೃತಿಗಳೂ ಸರ್ವಕಾಲದ ವುಗಳೆಂದು ಅವರು ತಿಳಿದಿದ್ದರು. ಆದುದರಿಂದ ಬೇರೆಬೇರೆ ಯುಗಗಳಿಗೆ ಬೇರೆಬೇರೆ ಸ್ಮೃತಿಗಳನ್ನು ಅವಲಂಬಿಸದೆ ಎಲ್ಲಾ ಸ್ಮೃತಿಗಳ ಸಹಾಯವನ್ನು ತೆಗೆದುಕೊಂಡು ಧರ್ಮವಿಚಾರವನ್ನು ಮಾಡಿರುವರು. ಹಾಗೆಯೇ ಈ ಯುಗದಲ್ಲಿಯೂ ಧರ್ಮ ಸಿಂಧು, ನಿರ್ಣಯಸಿಂಧು, ಅಷ್ಟಾವಿಂಶತಿತತ್ವ ಮೊದಲಾದ ಗ್ರಂಥಗಳನ್ನು ರಚಿಸಿದ ವರೂ ಕೂಡ ಎಲ್ಲಾ ಸ್ಮೃತಿಗಳನ್ನೂ ಅವಲಂಬಿಸಿಯೇ ಧರ್ಮದ ಅನೇಕ ವಿಷಯ ಗಳನ್ನು ವಿಚಾರಮಾಡಿರುವರು.

ಮನುಷ್ಯರಾಗಿರುವವರಿಗೂ ಎಲ್ಲರಿಗೂ ಒಂದೇ ವಿಧವಾದ ಧರ್ಮಶಾಸ್ತ್ರವ ಪ್ರಲಯಕಾಲದವರಿಗೂ ಇದ್ದೇ ಇರುವದು. ಇದುವರಿಗಿನ ಪಂಡಿತರುಗಳೆಲ್ಲರೂ ಇದೇ ಅಭಿಪ್ರಾಯವುಳ್ಳವರಾಗಿದ್ದರು. ಎಂಬುದು ಶಾಸ್ತ್ರದಿಂದ ನಿಶ್ಚಿತವಾಗಿದೆ

ವದು. ಕೇವಲ ಪಂಡಿತ ಈಶ್ವರಚಂದ್ರರೇ ಮುಂತಾದ ವಿಧವಾವಿವಾಹ ಪಕ್ಷದವರೇನೇ ಇದಕ್ಕೆ ವಿರುದ್ಧವಾದ ಹೊಸಸಿದ್ಧಾಂತವನ್ನು ಕಲ್ಪಿಸಿರುವರು. ಆದರೆ ಇವರ ಸಿದ್ಧಾಂತವು ಧರ್ಮಮಾರ್ಗದಲ್ಲಿ ಕಲಹವನ್ನು ತಂದೊಡ್ಡುವದಾಗಿದೆ. ಈ ಸಿದ್ಧಾಂತವು ಖಂಡಿತವಾಗಿಯೂ ಕಲಿಯುಗಧರ್ಮವೆನ್ನಿಸಿಕೊಳ್ಳುವದು. ಏಕೆಂದರೆ, ಕೃತಯುಗದಲ್ಲಿ ಹೀಗಿರಲೇ ಇಲ್ಲ. ಅದರಮುಂದೆ ಕ್ರಮಕ್ರಮವಾಗಿ ಮನುಷ್ಯರ ಪ್ರವೃತ್ತಿಯು ದೂಷಿತವಾಗಿಯೂ, ಧರ್ಮವಿರುದ್ಧವಾಗಿಯೂ ಆಗುತಲಿದೆ. ಇದನ್ನೇ ಯುಗಧರ್ಮವೆಂದು ಹೇಳುವರು. ಶಾಸ್ತ್ರವು ಮಾತ್ರ ಸದಾ ಒಂದೇವಿಧವಾಗಿ ವಿಹಿತಕಾರ್ಯವನ್ನು ಉಪದೇಶಮಾಡುತ್ತಿರುವದು.

ಪಂಡಿತ ಈಶ್ವರಚಂದ್ರರು ಬೇರೆಬೇರೆಯುಗಳಲ್ಲಿ ಬೇರೆಬೇರೆ ಧರ್ಮಶಾಸ್ತ್ರವೆಂಬುವದನ್ನು ಹೀಗೆ ತೋರಿಸುವರು.

> ಅನ್ಯೇಕೃತಯುಗೇಧರ್ಮಾಸ್ತ್ರೇತಾಯಾಂದ್ವಾಪರೇಪರೇ ।
> ಅನ್ಯೇಕಲಿಯುಗೇನೃಣಾಂಯುಗಹ್ರಾಸಾನುರೂಪತಃ ।
> ತಪಃಪರಂಕೃತಯುಗೇತ್ರೇತಾಯಾಂಜ್ಞಾನಮುಚ್ಯತೇ ।
> ದ್ವಾಪರೇಯಜ್ಞಮೇವಾಹುರ್ದಾನಮೇಕಂಕಲೌಯುಗೇ ॥

ಮನುಸ್ಮೃತಿ ಅಧ್ಯಾಯ ೧ ಶ್ಲೋಕ 85-86

ಉಕ್ತಪಂಡಿತರು ಈ ಶ್ಲೋಕಗಳಿಗೆ ಹೀಗೆ ಅರ್ಥವನ್ನು ಮಾಡುವರು. ಯುಗಕ್ಕೆ ತಕ್ಕಂತೆ ಮನುಷ್ಯರಶಕ್ತಿಯು ಕಡಮೆಯಾಗುವದರಿಂದ ಕೃತಯುಗದ ಧರ್ಮವೇ ಬೇರೆಯಾಗಿಯೂ, ತ್ರೇತಾಯುಗಧರ್ಮವೇ ಬೇರೆಯಾಗಿಯೂ ದ್ವಾಪರದ ಧರ್ಮವೇ ಬೇರೆಯಾಗಿಯೂ ಕಲಿಯುಗಧರ್ಮವೇ ಬೇರೆಯಾಗಿಯೂ ಇರುವದು ಕೃತಯುಗದ ಪ್ರಧಾನ ಧರ್ಮವು ತಪಸ್ಸಾಗಿಯೂ, ತ್ರೇತಾಯುಗದ ಧರ್ಮವು ಜ್ಞಾನವಾಗಿಯೂ ಇರುವದು. ಹಾಗೆಯೇ ದ್ವಾಪರದಲ್ಲಿ ಯಜ್ಞವೇ ಪ್ರಧಾನ ಧರ್ಮವಾಗಿಯೂ, ಕಲಿಯುಗದಲ್ಲಿ ದಾನವೇ [illegible]ವಾಗಿಯೂ ಇರುವದು.

ಉಕ್ತಪಂಡಿತರು ಮನುಸ್ಮೃತಿಯ ಈ ವಚನಗಳಿಗೆ ಸರಿಯಾದ ಅರ್ಥವನ್ನು ಮಾಡದೆ ಜನಗಳನ್ನು ಭ್ರಮದಲ್ಲಿಯೂ ಪ್ರಮಾದದಲ್ಲಿಯೂ ತಳ್ಳುತ್ತಿರುವರು. ಯುಗಯುಗಕ್ಕೂ ಮನುಷ್ಯರ ಧರ್ಮಗಳು ಭಿನ್ನಭಿನ್ನಗಳಾಗಿವೆ ಎಂದು ಮನುಮಹಾರಾಜನೇ ಹೇಳಿರುವದರಿಂದ ಪ್ರತಿಯೊಂದು ಯುಗಕ್ಕೆ ಧರ್ಮಶಾಸ್ತ್ರವು ಭಿನ್ನಭಿನ್ನವಾಗಿಯೇ ಇರುವದೆಂಬುವದು ಸ್ಪಷ್ಟವಾಗುವದೆಂದು ಈಶ್ವರ

ಚಂದ್ರವಿದ್ಯಾಸಾಗರರು ನಿರ್ಣಯವಮಾಡಿರುವರು. ಈ ಕಾಲದ ನವಶಿಕ್ಷಿತ ಮನಸ್ಸು ಬಾಲ್ಯದಿಂದಲೂ ಪಾಶ್ಚಾತ್ಯವಿದ್ಯೆ, ಮತ್ತು ಪಾಶ್ಚಾತ್ಯರೀತಿ ನೀತಿಗಳು ಇವುಗಳಿಂದ ಅಧಿಕವಾಗಿ ರಂಗಳಿಸಲ್ಪಟ್ಟಿರುವದು. ಪಂ|| ಈಶ್ವರಚಂದ್ರವಿದ್ಯಾ ಸಾಗರರೇ ಮೊದಲಾದ ವಿಧವಾವಿವಾಹಪಕ್ಷದವರ ಪಾಶ್ಚಾತ್ಯರೀತಿಯ ಮಾತು ಗಳು ಇವರುಗಳಿಗೆ ಬಹು ರುಚಿಕರವಾಗಿರುವದು. ಪಂ|| ಈಶ್ವರಚಂದ್ರರೂ ಸಹ ಇಂಗ್ಲೀಷ್ ಸಂಕೃತಗಳಲ್ಲಿ ಪ್ರವೀಣರೆಂದು ಪ್ರಸಿದ್ಧರಾಗಿದ್ದರು. ಆದುದರಿಂ ಅವರ ಮಾತುಗಳು ನವ್ಯಶಿಕ್ಷಿತರಲ್ಲಿ ಹೆಚ್ಚು ಕೆಲಸಮಾಡುತ್ತವೆ. ಅವರ ಮಾತು ಗಳು ಮನಃ ಪರಿಕಲ್ಪಿತಗಳೇ ? ಅಥವಾ ಶಾಸ್ತ್ರದ ಗೂಢವಿಚಾರದಿಂದ ಕೂಡಿದ್ದೇ? ಎಂಬುವದನ್ನೂ ಸಹ ಯಾರೂ ವಿಚಾರಮಾಡಲಿಲ್ಲ. ಪಂಡಿತ ಈಶ್ವರಚಂದ್ರ ವಿದ್ಯಾಸಾಗರರು ಮನುಸ್ಮೃತಿಯ ಶ್ಲೋಕಗಳಿಗೆ ಮಾಡಿರುವ ಅರ್ಥವು ವಾಸ್ತವ ವಾಗಿಯೂ ಭ್ರಮದಿಂದಲೂ ಪ್ರಮಾದದಿಂದಲೂ ಭರಿತವಾಗಿರುವದು. ಇದು ಸರಿಯಾದ ಅರ್ಥವನ್ನು ತಿಳಿಸುವದಕ್ಕೆ ಮೊದಲು ಅದರ ಹಿಂದಿನ ಕೆಲವು ಶ್ಲೋಕ ಗಳನ್ನು ಬರಿಯುತ್ತೇವೆ. ಅದರಿಂದ ಈ ಎರಡು ಶ್ಲೋಕಗಳ ಸರಿಯಾದ ಅರ್ಥ ವೇನೆಂಬುವದನ್ನು ತಿಳಿದುಕೊಳ್ಳಬಹುದು.

ಚತುಷ್ಪಾತ್ಸಕಲೋಧರ್ಮಸ್ಸತ್ಯಂಚೈವಕೃತೆಯುಗೆ |
ನಾಧರ್ಮೇನಾಗಮಃಕಶ್ಚಿನ್ಮನುಷ್ಯಾನ್ಪ್ರತಿವರ್ತತೆ ||
ಇತರೇಷ್ವಾಗಮಾದ್ಧರ್ಮಃಪಾದಶಸ್ತ್ವವರೋಪಿತಃ |
ಚಾರಿಕಾನೃತಮಾಯಾಭಿರ್ಧರ್ಮಶ್ಚಾಪೈತಿವಾದಶಃ ||
ಅರೋಗಾಸ್ಸರ್ವಸಿದ್ಧಾರ್ಥಾಶ್ಚತುರ್ವರ್ಗಶತಾಯುಷಃ |
ವೇದೋಕ್ತಮಾಯುರ್ಮರ್ತ್ಯಾನಾಮಾಶಿಷಶ್ಚೈವಕರ್ಮಣಾಂ |
ಫಲನ್ತ್ಯನುಯುಗಂಲೋಕೆಪ್ರಭಾವಶ್ಚಶರೀರಿಣಾಂ ||
ಅನ್ಯೇಕೃತಯುಗೆಧರ್ಮಾಸ್ತ್ರೇತಾಯಾಂದ್ವಾಪರೆಪರೆ |
ಅನ್ಯೇಕೃತಯುಗೆನೃಣಾಂಯುಗಹ್ರಾಸಾನುರೂಪತಃ ||
ತಪಃಪರಂಕೃತಯುಗೆತ್ರೇತಾಯಾಂಜ್ಞಾನಮುಚ್ಯತೆ |
ದ್ವಾಪರೆಯಜ್ಞಮೇವಾಹುರ್ದಾನಮೇಕಂಕಲೌಯುಗೇ ||

ಕೃತಯುಗದಲ್ಲಿ ಧರ್ಮವು ನಾಲ್ಕುಪಾದಗಳಿಂದಲೂ ಪೂರ್ಣವಾಗಿದ್ದಿತು. ಸಮಸ್ತ ಜನಗಳೂ ಸತ್ಯವನ್ನು ಪಾಲಿಸುತ್ತಿದ್ದರು. ಯಾರೂ ಧನವನ್ನೂ ವಿದ್ಯೆಯನ್ನೂ ಅಧರ್ಮದಿಂದ ಸಂಪಾದಿಸುತ್ತಿರಲಿಲ್ಲ. ತ್ರೇತಾದ್ವಾಪರಯುಗಗಳಲ್ಲಿ ಕ್ರಮವಾ

ಕಳ್ಳತನ, ಸುಳ್ಳು, ಮೋಸ ಮೊದಲಾದ ಅಧರ್ಮಾಚರಣಗಳಿಂದ ದ್ರವ್ಯಸಂಪಾದನೆಯೂ, ವಿದ್ಯಾಸಂಪಾದನೆಯೂ ಆಗುವದು. ಅಂದರೆ ಯುಗಯುಗದಲ್ಲಿಯೂ ಧರ್ಮದ ಒಂದೊಂದು ಪಾದವು ಹೀನವಾಗುತ ಬರುವದು. ಕೃತಯುಗದಲ್ಲಿ ಎಲ್ಲರೂ ರೋಗರಹಿತರಾಗಿಯೂ, ಸಿದ್ಧಮನೋರಥರಾಗಿಯೂ, ನಾನೂರುವರ್ಷಗಳ ಪರಮಾಯುಸ್ಸುಳ್ಳವರಾಗಿಯೂ, ಇದ್ದರು. ತ್ರೇತಾಯುಗವೇ ಮೊದಲಾದವುಗಳಲ್ಲಿ ಕ್ರಮವಾಗಿ ಪರಮಾಯುಸ್ಸಿನ ಒಂದೊಂದು ಪಾದವೂ ಸಹ ಕ್ಷೀಣವಾಗುತ ಬರುವದು. ಮನುಷ್ಯನ ಪರಮಾಯುಸ್ಸು, ಕಾಮ್ಯಕರ್ಮದ ಫಲವೂ, ಶಾಪದಫಲವೂ, ಪ್ರಸನ್ನವಾಗಿ ಅನುಗ್ರಹಮಾಡುವದರ ಫಲವೂ ಸಹ ಯುಗಕ್ಕೆ ತಕ್ಕಂತೆಯೇ ಆಗುವದು. ಕೃತಯುಗದಲ್ಲಿ ಮನುಷ್ಯರ ಧರ್ಮವು ಒಂದೇವಿಧವಾಗಿರುವದು. ತ್ರೇತಾಯುಗವೇ ಮೊದಲಾದವುಗಳ ರೂಪದಲ್ಲಿ ವ್ಯತ್ಯಾಸವುಂಟಾದಹಾಗೆಲ್ಲಾ ಧರ್ಮದಲ್ಲಿಯೂ ವ್ಯತ್ಯಾಸವು ಉಂಟಾಗುವದು. ಕೃತಯುಗದಲ್ಲಿ ತಪಸ್ಸೂ ತ್ರೇತಾಯುಗದಲ್ಲಿ ಆತ್ಮಜ್ಞಾನವೂ, ದ್ವಾಪರದಲ್ಲಿ ಯಜ್ಞವೂ, ಕಲಿಯುಗದಲ್ಲಿ ದಾನವೂ ಸಹ ಇವುಗಳೇನೇ ಪ್ರಧಾನಧರ್ಮವಾಗುವದು.

ಈ ವಚನಗಳೆಲ್ಲದರ ತಾತ್ಪರ್ಯವೇನೆಂದರೆ, ಕೃತಯುಗದಲ್ಲಿ ಮಾನವರೆಲ್ಲರಿಗೂ ಧರ್ಮದಲ್ಲಿ ಅಧಿಕವಾದ ಆಸಕ್ತಿಯು ಇರುವದು. ದುರ್ವ್ಯಾಪಾರಗಳೆಲ್ಲವೂ ದುರ್ಬಲಗಳಾಗಿಯೂ, ಕ್ಷೀಣಗಳಾಗಿಯೂ ಇರುವವು. ಎಲ್ಲರ ಅಪೇಕ್ಷೆಯೂ, ಸಂಕಲ್ಪವೂ ಉತ್ತಮವಾಗಿಯೂ ಪಾಪರಹಿತವಾಗಿಯೂ ಇರುವದು. ಅಧರ್ಮದ ನೆರಳೂ ಕೂಡ ಸ್ಪರ್ಶಮಾಡಲಾರದಾಗಿತ್ತು. ಎಲ್ಲರೂ ದಾನ, ಯಜ್ಞ, ಆತ್ಮಜ್ಞಾನ, ತಪಸ್ಸು ಈ ಧರ್ಮಗಳಲ್ಲಿ ತತ್ಪರರಾಗಿದ್ದರು.

ಸುಲಭವಾದ ಧರ್ಮಗಳೊಳಗೆಲ್ಲ ದಾನವು ಪ್ರದಾನವಾದುದು. ಯಜ್ಞಮಾಡಬೇಕಾದರೆ ದಾನಕ್ಕಿಂತಲೂ ಹೆಚ್ಚು ಶಕ್ತಿಯು ಬೇಕು. ಆತ್ಮಜ್ಞಾನಕ್ಕೆ ಅದಕ್ಕಿಂತಲೂ ಹೆಚ್ಚು ಶಕ್ತಿಯು ಬೇಕು. ತಪಸ್ಸಿಗೆ ಎಲ್ಲಕ್ಕಿಂತಲೂ ಹೆಚು ಶಕ್ತಿಯು ಬೇಕು. ಆದರೆ ಕೃತಯುಗದಲ್ಲಿ ಮಾನವರಿಗೆ ಸಂಪೂರ್ಣವಾದ ಶಕ್ತಿಯು ಇದ್ದಿತು. ಆದುದರಿಂದ ಅವರು ಸರ್ವಧರ್ಮಕರ್ಮಗಳನ್ನೂ ಸಹಜವಾಗಿಯೇ ಮಾಡುತ್ತಿದ್ದರು. ಧರ್ಮಸಾಧನೆಯಲ್ಲಿ ವಿಘ್ನಕಾರಿಗಳಾದ ರೋಗ ಮೊದಲಾದವುಗಳು ಅವರಿಗೆ ಇರುತ್ತಿರಲಿಲ್ಲ. ಅವರ ಅಪೇಕ್ಷೆಗಳೆಲ್ಲವೂ ಸಿದ್ಧವಾಗುತಿದ್ದವು. ಎಲ್ಲರೂ ಪೂರ್ಣವಾದ ಆಯುಸ್ಸುಳ್ಳವರಾಗಿದ್ದರು.

ತ್ರೇತಾದ್ವಾಪರಕಲಿಗಳಲ್ಲಿ ಕ್ರಮವಾಗಿ ಇವುಗಳು ಕಡಮೆಯಾಗುವ ರೊಂದಿಗೆ ಜನಗಳಲ್ಲಿ ದುರ್ವ್ಯಾಪಾರಗಳು ಹೆಚ್ಚಿ ಧಾರ್ಮಿಕ ಸ್ವಭಾವಕ್ಕೆ ಹಾ ವುಂಟಾಗುವದು. ಆದುದರಿಂದಲೇ ಪರಧನವನ್ನು ಹರಣಮಾಡುವದು, ಸುಳ್ಳ ಹೇಳುವದು, ಮೋಸಮಾಡುವದು, ಮೊದಲಾದ ಅಧರ್ಮಗಳು ಹೆಚ್ಚುವವು. ತ್ರೇ ತಾಯುಗದಲ್ಲಿ ಆತ್ಮಜ್ಞಾನ, ಯಜ್ಞ, ದಾನ, ಹಾಗೆಯೇ ಇನ್ನೂ ಇತರ ಸುಲ ಸಾಧ್ಯಗಳಾದ ಧರ್ಮಗಳನ್ನು ಮಾಡಬಲ್ಲವರಾಗುವರು. ತಪೋರೂಪವಾ ಧರ್ಮವು ಆತ್ಮಜ್ಞಾನಕ್ಕಿಂತಲೂ ಹೆಚ್ಚಿನ ಶ್ರಮದಿಂದ ಸಾಧಿಸಬೇಕಾಗಿರು ಕಾರಣ ಆ ಸಮಯದ ಮನುಷ್ಯರಲ್ಲಿ ಆಶಕ್ತಿಯು ಇರುವದಿಲ್ಲ. ಆದುದರಿಂ ಆ ಕಾಲದಲ್ಲಿ ತಪಸ್ಸನ್ನು ಮಾಡಿದಾಗ್ಯೂ ಸರಿಯಾದ ಫಲವು ದೊರಕುವದಿಲ್ಲ. ಈ ಕಾರಣದಿಂದ ತ್ರೇತಾಯುಗದಲ್ಲಿ ಜ್ಞಾನವೇ ಪ್ರಧಾನಧರ್ಮವಾಗುವದು. ಹಾ ಗೆಯೇ ಧರ್ಮಕ್ಕೆ ಹಾನಿಯೂ ಅಧರ್ಮದ ವೃದ್ಧಿಯೂ ಆಗುವದರಿಂದ ಜನಗಳ ರೋಗಗಳು ಹೆಚ್ಚುವದೂ, ಎಷ್ಟು ಪ್ರಯತ್ನಮಾಡಿದರೂ ಮನೋರಥವು ಸಿದ್ಧವಾ ಗದೆ ಹೋಗುವದೂ, ಆಯುಸ್ಸಿನ ಕ್ಷೀಣತೆಯೂ, ಉಂಟಾಗುವದು. ದ್ವಾಪರ ಮತ್ತು ಕಲಿಯುಗಗಳಲ್ಲಿ ಧರ್ಮಭಾವವು ಇನ್ನೂ ದುರ್ಬಲವಾಗುವದರಿಂದ ತ್ರೇ ತಾಯುಗದಂತೆ ಜ್ಞಾನವನ್ನು ಪಡೆಯುವ ಶಕ್ತಿಯು ಮನುಷ್ಯರಲ್ಲಿರುವದಿಲ್ಲ. ಇ ದರಿಂದ ದ್ವಾಪರದಲ್ಲಿ ಯಜ್ಞವೂ ಕಲಿಯುಗದಲ್ಲಿ ದಾನವೂ ಧರ್ಮಾಚರಣದ ಎಲ್ಲೆ ಯಾಗಿ ಪರಿಣಮಿಸುವದು. ಅಲ್ಲದೆ ಕ್ರಮಕ್ರಮವಾಗಿ ಮನುಷ್ಯರಲ್ಲಿ ನಾನಾವಿಧವಾದ ರೋಗಗಳೂ, ಉದ್ಯೋಗಮಾಡಿದರೂ ಕಾರ್ಯವು ಸಿದ್ಧವಾಗದಿರುವದೂ, ಆಯುಸ್ಸ ಅಲ್ಪವಾಗುವದೂ ಸಹ ಮತ್ತೆಮತ್ತೆ ಹೆಚ್ಚುತ್ತ ಬರುವದು. ತ್ರೇತಾಯುಗದಲ್ಲಿ ಕೃತಯುಗವೂ, ದ್ವಾಪರದಲ್ಲಿ ತ್ರೇತಾಯುಗವೂ, ಕಲಿಯುಗದಲ್ಲಿ ದ್ವಾಪರಯು ಗವೂ ಕ್ಷೀಣವಾಗುತ ಅದಕ್ಕೆ ತಕ್ಕಂತೆ ಧರ್ಮವೂ ಕ್ಷೀಣವಾಗಿ ಫಲದಲ್ಲಿಯೂ ಸಹ ಕ್ಷೀಣತೆಯು ಉಂಟಾಗುವದು. ಕುಲ್ಲೂಕಭಟ್ಟರು "ಕೃತಯುಗೇ ಅಸ್ಯಧರ್ಮಾ ಭವನ್ತಿ ತ್ರೇತಾದಿಷ್ವಪಿಯುಗೋಪಚಯಾನುಸಾರೇಣಧರ್ಮವೈಲಕ್ಷಣ್ಯಮ್" ಎಂದು ಇದೇ ಅರ್ಥವನ್ನು ತೋರಿಸಿರುವರು.

ಹಿಂದೆ ಹೇಳಿದ ಶ್ಲೋಕಗಳಿಗೆ ಪರಸ್ಪರ ವಿಶೇಷ ಸಂಬಂಧವಿರುವದೆಂಬಂ ಶವೂ, ಇದರಲ್ಲಿ ಯಾವ ವಚನವೂ ವಿಧಿಯಾಗಲಿ ನಿಷೇಧವಾಗಲಿ ಅಲ್ಲವೆಂಬುವದೂ ಕೇವಲ ನಾಲ್ಕು ಯುಗಗಳಲ್ಲಿ ಮನುಷ್ಯರ ಧರ್ಮಭಾವವು ಕ್ರಮವಾಗಿ ನ್ಯೂನವಾ ಗುವದೂ, ಹೆಚ್ಚುವದೂ, ಧರ್ಮವನ್ನು ಮಾಡುವದರಲ್ಲಿ ಶಕ್ತಿಯ ನ್ಯೂನಾಧಿಕ

ಭಾವವೂ, ಆರೋಗ್ಯದ ಹೆಚ್ಚುಕಡಮೆಗಳೂ ಸಹ ಹೇಗೆ ಸ್ವಭಾವಸಿದ್ಧಗಳಾಗುತ್ತವೆ ಎಂಬುವದನ್ನು ಮಾತ್ರ ಈ ಶ್ಲೋಕಗಳು ಹೇಳುತ್ತವೆ ಎಂಬುವದೂ ಸಹ ಇದರಿಂದ ಸ್ಪಷ್ಟವಾಗುವದು.

ಹೀಗಿರುವಾಗ "ಅನ್ಯೇಕೃತಯುಗೇಧರ್ಮಾಃ" ಎಂಬುವ ವಚನವನ್ನು ಆಧಾರವಾಗಿಟ್ಟುಕೊಂಡು ಬೇರೆ ಬೇರೆ ಯುಗಗಳಿಗೆ ಬೇರೆ ಬೇರೆ ಧರ್ಮವಾಗುವದೆಂದು ಮನು ವಚನದ ಅಭಿಪ್ರಾಯವೆಂದು ಪಂ|| ಈಶ್ವರಚಂದ್ರವಿದ್ಯಾಸಾಗರರು ಹೇಳುವದು ಎಂದಿಗೂ ಸಂಗತವಾಗಲಾರದು. ಏಕೆಂದರೆ ಮನುವು ಯುಗಭೇದದಿಂದ ಸ್ವಾಭಾವಿಕವಾಗಿ ಮನುಷ್ಯರಲ್ಲಿ ಉಂಟಾಗುವ ಧರ್ಮಭಾವದ ವ್ಯತ್ಯಾಸವನ್ನು ಮಾತ್ರ ತೋರಿಸಿರುವನು. ಈ ಅಂತರವು ವೈಧವೆಂದು ಹೇಳಲಿಲ್ಲ. ಈ ಅಂತರವು ವಿಧಿಯೇ ಆದ ಪಕ್ಷದಲ್ಲಿ ಧರ್ಮಶಾಸ್ತ್ರಗಳ ಅವಶ್ಯಕತೆಯೇ ಇರುವದಿಲ್ಲ.

ಕೃತಯುಗದಲ್ಲಿ ಎಲ್ಲರೂ ಎಲ್ಲಾ ವಿಧವಾದ ಧರ್ಮವನ್ನೂ ಮಾಡುವರು. ಕಲಿಯುಗದಲ್ಲಿ ಮೋಸಗಾರರೂ ಸುಳ್ಳುಹೇಳುವವರೂ ಅಧಾರ್ಮಿಕರೂ ಆಗುವರು ಎಂದು ಹೀಗೆ ಹೇಳಿ ಇದ್ದರೆ ಆ ಧರ್ಮದ ವ್ಯತ್ಯಾಸವು ವೈಧವೆಂದು ಒಪ್ಪಬಹುದಾಗಿದ್ದಿತು. ಅಲ್ಲದೆ ಕಲಿಯುಗದಲ್ಲಿ ಮನುಷ್ಯರು ಕಳ್ಳರೂ, ಸುಳ್ಳರೂ, ಮೋಸಗಾರರೂ, ಎಲ್ಲಾ ಭಾಗದಲ್ಲಿಯೂ ಅಧಾರ್ಮಿಕರೂ ಆಗಬೇಕಾದುದೇ ನ್ಯಾಯವಾಗಬೇಕಾಗಿದ್ದಿತು. ಹಾಗೆ ಅಧಾರ್ಮಿಕರಾಗದೆ ಇದ್ದಿದ್ದರೆ ಅವರು ಧರ್ಮಶಾಸ್ತ್ರದ ಪ್ರಕಾರ ದೋಷಿಗಳಾಗುತಿದ್ದರು. ಹೀಗೆ ಪಂಡಿತ ಈಶ್ವರಚಂದ್ರವಿದ್ಯಾಸಾಗರರ ಅರ್ಥವನ್ನು ಒಪ್ಪಿದರೆ ಧರ್ಮಶಾಸ್ತ್ರದಲ್ಲಿ ಬಹಳ ಗಡಿಬಿಡಿಯುಂಟಾಗುವದು. ಆದುದರಿಂದ ಅವರ ಅರ್ಥವು ದೂರತಸ್ತ್ಯಾಜ್ಯವು. ಪಂ|| ಈಶ್ವರಚಂದ್ರವಿದ್ಯಾಸಾಗರರ ಅಭಿಪ್ರಾಯದಲ್ಲಿ "ಅನ್ಯೇಕೃತಯುಗೇಧರ್ಮಾಃ" ಇತ್ಯಾದಿ ವಚನಗಳಿಂದ ಭಿನ್ನ ಭಿನ್ನ ಯುಗಗಳಿಗೆ ಭಿನ್ನ ಭಿನ್ನ ಧರ್ಮಗಳೆಂದು ಮನುವು ಸ್ವಯಂ ಹೇಳಿರುವನು. ಆದರೆ ಯಾವ ಯುಗಕ್ಕೆ ಯಾವದು ಧರ್ಮವೆಂಬುವದನ್ನು ಮಾತ್ರ ವ್ಯವಸ್ಥೆಮಾಡಲಿಲ್ಲವೆಂದು ಇಷ್ಟು ಜನಗಳ ಮನಸ್ಸಿಗೆ ಬರುವಂತೆ ಮಾಡಿದರೆ ಭಿನ್ನ ಭಿನ್ನ ಯುಗಗಳಿಗೆ ಭಿನ್ನ ಭಿನ್ನವಾದ ಧರ್ಮಶಾಸ್ತ್ರಗಳು ಯಾವವು ? ಎಂಬ ಜಿಜ್ಞಾಸೆಯುಂಟಾಗುವದು. ಆಗ

"ಕೃತೇತುಮಾನವಾಧರ್ಮಾಸ್ತ್ರೇತಾಯಾಂಗೌತಮಾಸ್ಮೃತಾಃ |
ದ್ವಾಪರೇಶಂಖಲಿಖಿತಾಃ ಕಲೌಪಾರಾಶರಾಸ್ಮೃತಾಃ ||"

ಎಂಬ ಪರಾಶರ ವಚನವನ್ನು ತೋರಿಸಿ ಕೃತಯುಗಕ್ಕೆ ಮನುಧರ್ಮಶಾಸ್ತ್ರವೆ ಲೂ ಕಲಿಯುಗಕ್ಕೆ ಪರಾಶರಸ್ಮೃತಿಎಂತಲೂ ಸಿದ್ಧಮಾಡಿ ಕಲಿಯುಗದಲ್ಲಿ ವಿಧ ವಿವಾಹವು ಶಾಸ್ತ್ರಾನುಕೂಲವೆಂದು ಸಿದ್ಧಮಾಡಿಬಿಡುತ್ತೇವೆಂದು ಇದ್ದಿತ್ತು. ದರೆ ಮನುವಚನದಿಂದ ಪಂ|| ಈಶ್ವರಚಂದ್ರ ವಿದ್ಯಾಸಾಗರರ ಅಭಿಪ್ರಾಯ ಸಿದ್ಧವಾಗುವದಿಲ್ಲ. ಅದರ ಕಾರಣವನ್ನು ಹಿಂದೆಯೇ ತಿಳಿಸಿರುತ್ತೇವೆ. ಮನು ತನ್ನ ಧರ್ಮಶಾಸ್ತ್ರದಲ್ಲಿ ಯಾವ ಕರ್ಮಗಳ ವಿಧಾನವನ್ನೂ ನಿಷೇಧವನ್ನೂ ಮಾ ಡಿರುವನೋ ಅದು ಕೇವಲ ಯಾವುದಾದರೂ ಒಂದು ಯುಗಕ್ಕೆಂದು ಸಿದ್ಧವಾ ವದಿಲ್ಲ. ಈ ಅಂಶವನ್ನು ಪಂ|| ಈಶ್ವರಚಂದ್ರ ವಿದ್ಯಾಸಾಗರರು ತಮ್ಮ ಪುಸ್ತ ಕದಲ್ಲಿ ಒಂದುಕಡೆ ಸ್ವೀಕಾರಮಾಡಿರುವರು. "ವಾಸ್ತವದಲ್ಲಿ ತಪಸ್ಸು ಮೊದ ದವುಗಳು ಎಲ್ಲಯುಗಕ್ಕೂ ಧರ್ಮಗಳೇ ಹೌದು. ಆದರೂ ತಪಸ್ಸು ಮೊದಲಾದ ಗಳಲ್ಲಿ ಒಂದೊಂದು ಒಂದೊಂದು ಯುಗಕ್ಕೆ ಪ್ರಧಾನಧರ್ಮಗಳೆಂದು ಮನುವ ಸದ ತಾತ್ಪರ್ಯವು" ಎಂದು

ಮನುಸ್ಮೃತಿಯಲ್ಲಿ ಹೇಳಿರುವ ತಪಸ್ಸು ಮೊದಲಾದ ಧರ್ಮಗಳೆಲ್ಲವೂ ಯು ಗಗಳೆಲ್ಲಕ್ಕೂ ವಿಹಿತವಾದವುಗಳು. ಮತ್ತು ಮನುಧರ್ಮ ಶಾಸ್ತ್ರದಲ್ಲಿ ತಪಸ್ಸು ಮೊ ಲಾದ ಅಧಿಕಪರಿಶ್ರಮಸಾಧ್ಯವಾದ ಧರ್ಮಗಳೂ ಅವುಗಳಿಗಿಂತಲೂ ಅತ್ಯಲ್ಪಪ ಶ್ರಮಸಾಧ್ಯವಾದ ಧರ್ಮಗಳೂ ಸಹ ಉಕ್ತಗಳಾಗಿವೆ ಎಂದಮೇಲೆ ಮನುವು ಕ ಯುಗದ ಧರ್ಮವನ್ನು ಹೇಳಿ ಇಲ್ಲವೆಂದು ಹೇಗೆ ಸಿದ್ಧವಾಗುವದೆಂಬುದನ್ನು ವಿ ರಶೀಲರು ತಿಳಿಯಬಹುದು. ತಪಸ್ಸು ಮೊದಲಾದುದು ಕಲಿಯುಗದ ಧರ್ಮವು ಹೌದು, ಆದರೆ ಅದು ಪರಮ ಕಷ್ಟಸಾಧ್ಯವಾದುದು. ಕಲಿಯುಗದವರ ಶ ಯಿಂದ ಈ ಕಠಿನಕಾರ್ಯವು ಆಗಲಾರದು. ಆದಕಾರಣ ಕಲಿಯುಗಕ್ಕೆ ಯೋಗ ವಾದ ಸುಲಭಧರ್ಮವನ್ನೇ ಉಪದೇಶಿಸಬೇಕೆಂದು ಹೇಳುವದಾದರೆ, ಹಾಗೆ ಹೇ ವವರು ಮನುಸ್ಮೃತಿಯನ್ನು ಆದಿಯಿಂದ ಅಂತ್ಯದವರಿಗೂ ಓದಿದರೆ ಅದರಲ್ಲಿ ಕಷ್ಟ ಸಾಧ್ಯವಾದ ಧರ್ಮದ ಉಪದೇಶಮಾತ್ರವೇ ಅಲ್ಲ. ಪೂರ್ಣಶಕ್ತಿ ಸಾಧ್ಯತಪ ನ್ನಾರಂಬಿಸಿ ಕ್ರಮಕ್ರಮವಾಗಿ ಹೀನಶಕ್ತಿಸಾಧ್ಯ ಧರ್ಮಾಚರಣವೂ ಸಹ ಸೋ ಪಾನಕ್ರಮದಂತೆ ಬಹು ಸುಂದರರೀತಿಯಿಂದ ವರ್ಣಿತವಾಗಿರುವದೆಂಬಂಶವು ತಿ ದುಬರುವದು. ಹೀಗಿರುವಾಗ ಮನುಸ್ಮೃತಿಯಲ್ಲಿ ಕಲಿಯುಗದ ಧರ್ಮವನ್ನು ಹೇಳಿ ಇಲ್ಲವೆಂದು ಹೇಗೆ ಹೇಳಬಹುದು ?

ಅಸ್ಮಿನ್ ಧರ್ಮೋಽಖಿಲೇನೋಕ್ತೋ ಗುಣದೋಷೌಚಕರ್ಮಣಾಂ |
ಚತುರ್ಣಾಮಪಿವರ್ಣಾನಾಮಾಚಾರಶ್ಚೈವಶಾಶ್ವತಃ ||

ಈ ಧರ್ಮಶಾಸ್ತ್ರದಲ್ಲಿ ಎಲ್ಲ ಧರ್ಮವೂ ಹೇಳಿರುವದು. ವಿಹಿತಧರ್ಮಗಳ ಗುಣಗಳೂ ನಿಂದಿತಕರ್ಮಗಳ ದೋಷಗಳೂ ಸಹ ವರ್ಣಿಸಲ್ಪಟ್ಟಿವೆ. ನಾಲ್ಕುವರ್ಣಗಳ ಪರಂಪರಾಗತವಾದ ಧರ್ಮವೂ ಸಹ ವರ್ಣಿತವಾಗಿರುವದು. ಇದರಿಂದ ಸರ್ವಕಾಲಿಕವಾದ ಸಕಲಧರ್ಮಗಳೂ ಅಂದರೆ ಸುಲಭವಾದ ಧರ್ಮಗಳನ್ನೂ ಕಠಿನವಾದ ಧರ್ಮಗಳನ್ನೂ ಸಹ ಮನುವು ಉಪದೇಶಮಾಡಿರುವನೆಂದು ಸ್ಪಷ್ಟವಾಗುವದು. ಕೃತಯುಗದ ಧರ್ಮವನ್ನು ಮಾತ್ರ ಹೇಳುವದಾಗಿದ್ದರೆ ಕೇವಲ ಕಷ್ಟಸಾಧಕವಾದ ಧರ್ಮವನ್ನೇ ಉಪದೇಶಿಸಬೇಕಾಗಿದ್ದಿತು. ಏಕೆಂದರೆ ಕೃತಯುಗದಲ್ಲಿ ಎಲ್ಲರೂ ಸಂಪೂರ್ಣ ಶಕ್ತಿಯುಳ್ಳವರಾಗಿದ್ದರು. ಯಾರಮನಸ್ಸೂ ಅಧರ್ಮದಕಡೆಗೆ ಹೋಗುತ್ತಿರಲಿಲ್ಲ. ಹೀಗಿರುವಲ್ಲಿ ಮನುಸ್ಮೃತಿಯಲ್ಲಿ ಮಾಡಬಾರದ ಕರ್ಮಗಳ ವರ್ಣನದ ಅವಶ್ಯಕತೆಯಾಗಲಿ ಅವನ್ನು ಕೆಟ್ಟದ್ದೆಂದು ಹೇಳುವ ಅವಶ್ಯಕತೆಯಾಗಲಿ ಏನು ಇದ್ದಿತು ? ಆದುದರಿಂದ ಮನುಸ್ಮೃತಿಯಲ್ಲಿ ಸರ್ವಯುಗಗಳ ಧರ್ಮೋಪದೇಶವೂ ಇರುವುದೆಂದು ತಿಳಿಯಬೇಕು.

ಈ ವಿಷಯವನ್ನು ಸ್ಪಷ್ಟವಾಗಿ ತಿಳಿಸುವದಕ್ಕಾಗಿ ಮನುಸ್ಮೃತಿಯ ಕೆಲವು ವಚನಗಳನ್ನು ಇಲ್ಲಿ ಬರೆಯುವೆವು.

ಸ್ವಾಧ್ಯಾಯೇನವ್ರತೈರ್ಹೋಮೈಸ್ತ್ರೈವಿದ್ಯೇನೇಜ್ಯಯಾಸುತೈಃ |
ಮಹಾಯಜ್ಞೈಶ್ಚಯಜ್ಞೈಶ್ಚಬ್ರಾಹ್ಮೀಯಂಕ್ರಿಯತೇತನುಃ ||

ವೇದಾಧ್ಯಯನ, ಮದ್ಯಮಾಂಸಾದಿ ತ್ಯಾಗರೂಪವಾದ ವ್ರತ, ಸಾವಿತ್ರಚರು ಮೊದಲಾದ ಹೋಮ, ತ್ರೈವಿದ್ಯವ್ರತ, ಬ್ರಹ್ಮಚರ್ಯ, ದೇವರ್ಷಿ ಪಿತೃತರ್ಪಣರೂಪ ಯಜ್ಞ, ಗೃಹಸ್ಥನಾಗಿ ಪುತ್ರನನ್ನು ಪಡೆಯುವದು, ಪಂಚಮಹಾಯಜ್ಞ, ಜ್ಯೋತಿಷ್ಟೋಮಾದಿಯಜ್ಞಗಳು ಇವುಗಳ ಮೂಲಕ ದೇಹವನ್ನು ಬ್ರಹ್ಮಪ್ರಾಪ್ತಿಗೆ ಯೋಗ್ಯವನ್ನಾಗಿ ಮಾಡಿಕೊಳ್ಳಬೇಕು. ಇದರಮೇಲೆ

ಓಂಕಾರಪೂರ್ವಿಕಾಸ್ತಿಸ್ರೋಮಹಾವ್ಯಾಹೃತಯೋಽವ್ಯಯಾಃ |
ತ್ರಿಪದಾಚೈವಸಾವಿತ್ರೀವಿಜ್ಞೇಯಂಬ್ರಹ್ಮಣೋಮುಖಂ ||
ಯೋಽಧೀತೇಽಹನ್ಯಹನ್ಯೇತಾಂತ್ರೀಣಿವರ್ಷಾಣ್ಯತಂದ್ರಿತಃ |
ಸಬ್ರಹ್ಮಪರಮಭ್ಯೇತಿವಾಯುಭೂತಸ್ಸ್ವಮೂರ್ತಿಮಾನ್ ||

ಏಕಾಕ್ಷರಂಪರಂಬ್ರಹ್ಮಪ್ರಾಣಾಯಾಮಃ ಪರಂತಪಃ |
ಸಾವಿತ್ರ್ಯಾಸ್ತುಪರಂನಾಸ್ತಿಮೌನಾತ್ಸತ್ಯಂವಿಶಿಷ್ಯತೇ ||

ಓಂಕಾರಪೂರ್ವಕವಾಗಿ ಮಹಾವ್ಯಾಹೃತಯುಕ್ತವಾದ ಅವ್ಯಯಾತ್ರಿಪದಾ ಗಾಯತ್ರಿಯನ್ನು ಬ್ರಹ್ಮಪ್ರಾಪ್ತಿಗೆ ಕಾರಣವನ್ನಾಗಿ ತಿಳಿಯಬೇಕು. ಪುರುಷನು ಪ್ರತಿದಿನವೂ ಪರಿಶುದ್ಧನಾಗಿ ಮೂರುವರ್ಷಗಳ ವರೆಗೆ ಓಂಕಾರದಿಂದಲೂ ವ್ಯಾಹೃತಿಗಳಿಂದಲೂ ಕೂಡಿದ ತ್ರಿಪದಗಾಯತ್ರಿಯನ್ನು ಜಪಮಾಡುವದಾದರೆ ಅವನು ವಾಯುವಿನಂತೆ ಕಾಮಚಾರಿಯಾಗಿ ಬ್ರಹ್ಮತತ್ವವನ್ನು ಹೊಂದುವದಕ್ಕೆ ಅರ್ಹನಾಗುವನು. ಏಕಾಕ್ಷರವಾದ ಓಂಕಾರವು ಪರಬ್ರಹ್ಮಸ್ವರೂಪವಾದದು. ಪ್ರಾಣಾಯಾಮವು ಪರಮ ತಪಸ್ಸಾಗಿರುವದು. ಗಾಯತ್ರಿಗಿಂತಲೂ ಉತ್ತಮವಾದ ಮಂತ್ರವಿಲ್ಲವು. ಮೌನಕ್ಕಿಂತಲೂ ಸತ್ಯವು ಶ್ರೇಷ್ಠವಾದುದು. ಓಂಕಾರ, ಪ್ರಾಣಾಯಾಮ, ವ್ಯಾಹೃತಿಯುಕ್ತ ತ್ರಿಪದಗಾಯತ್ರೀ, ಸತ್ಯಭಾಷಣ ಇವು ನಾಲ್ಕನ್ನೂ ಅನುಷ್ಠಾನದಲ್ಲಿಟ್ಟುಕೊಳ್ಳಬೇಕೆಂಬುವದು ಇದರ ತಾತ್ಪರ್ಯವಾಗಿರುವುದು.

ಮೊದಲಿನ ಶ್ಲೋಕದಲ್ಲಿ ವಿಶೇಷ ಶಕ್ತಿಯಿಂದ ಸಾಧಿಸಬೇಕಾದ ಅತಿ ಕಠಿಣ ಕಾರ್ಯಗಳನ್ನು ಅನುಷ್ಠಿಸುವದರಿಂದ ಬ್ರಹ್ಮಪ್ರಾಪ್ತಿಗೆ ಯೋಗ್ಯನಾಗುವನೆಂದು ತೋರಿಸಲ್ಪಟ್ಟಿತು. ಅದರಮೇಲೆ ಅಲ್ಪಶ್ರಮದಿಂದ ಸಾಧಿಸಬಹುದಾದ ಗಾಯತ್ರೀ ಜಪ, ಪ್ರಾಣಾಯಾಮ, ಸತ್ಯಭಾಷಣ ಇವುಗಳ ಮೂಲಕ ಮೋಕ್ಷವು ಲಭಿಸುವದೆಂದು ಹೇಳಲ್ಪಟ್ಟಿದೆ. ಈ ಪೂರ್ವೋತ್ತರ ವಚನಗಳಲ್ಲಿ ಕರ್ಮಮಾಡತಕ್ಕವರ ಶಕ್ತಿಯ ನ್ಯೂನಾಧಿಕ ಭಾವವನ್ನು ಅನುಸರಿಸಿ ಅನುಷ್ಠಾನದ ನ್ಯೂನಾಧಿಕ ಭಾವವು ತೋರಿಸಲ್ಪಟ್ಟಿರುವದೆಂಬಂಶವು ವಿಮರ್ಶಕರಾದ ಪಾಠಕರಿಗೆ ತಿಳಿದು ಬರುವದರಲ್ಲಿ ಸಂದೇಹವಿಲ್ಲ. ಕಠಿನವಾದ ತಪಸ್ಸಿನ ಮೂಲಕ ಪರಮೋನ್ನತಿಯನ್ನು ಹೊಂದುವ ಶಕ್ತಿಯಿಲ್ಲದವರು ಗಾಯತ್ರೀ ಜಪದಿಂದಲೂ ಸತ್ಯಭಾಷಣದಿಂದಲೂ ಮೋಕ್ಷವನ್ನು ಪಡೆಯಬಲ್ಲರು.

ಸಾವಿತ್ರೀಮಾತ್ರಸಾರೋಽಪಿವರಂವಿಪ್ರಸ್ಸುಯಂತ್ರಿತಃ |
ನಾಯಂತ್ರಿತಸ್ತ್ರಿವೇದೋಽಪಿಸರ್ವಾಶೀಸರ್ವವಿಕ್ರಯೀ ||

ನಿಯಮದಿಂದ ಇರತಕ್ಕ ಬ್ರಾಹ್ಮಣನು ಗಾಯತ್ರಿಯೊಂದನ್ನೇ ಅರಿತಿದ್ದರೂ ಸಾಕು ಅವನು ಶ್ರೇಷ್ಠನು. ಭೋಜನದ ನಿಯಮವಿಲ್ಲದೆಯೂ ಮಾರುವ ಪದಾರ್ಥಗಳ ನಿಯಮವಿಲ್ಲದೆಯೂ ಎಲ್ಲವನ್ನೂ ಭೋಜನಮಾಡುವ ಎಲ್ಲವನ್ನೂ ಮಾರುವ ಹದ್ದುಮೀರಿ ನಡೆಯುವವನು ಮೂರುವೇದಗಳನ್ನು ಅಭ್ಯಾಸಮಾಡಿ ಇದ್ದರೂ ಶ್ರೇಷ್ಠ

ಲ್ಲವು. ಅಂದರೆ ಮೂರುವೇದಗಳನ್ನು ಅಭ್ಯಾಸಮಾಡದೆ ಇದ್ದರೂ ಹಾನಿಯಿಲ್ಲ. ಗಾಯತ್ರೀಮಂತ್ರವನ್ನು ಮಾತ್ರ ಅರಿತುಕೊಂಡು ಸದಾಚಾರಿಯಾಗಿರಬೇಕೆಂದು ಹೇಳಿರುವದು.

ಧರ್ಮದ ನಾಲ್ಕುಪಾದಗಳೂ ಪೂರ್ಣವಾಗಿದ್ದ ಅಧರ್ಮದ ನೆರಳೂ ಸಹ ಇಲ್ಲದ ಕೃತಯುಗದಲ್ಲಿ ಮೇಲೆಹೇಳಿದಂತೆ ಸಂಭವಿಸುವದುಂಟೆ? ಎಂದಿಗೂ ಇಲ್ಲ. ಆದುದರಿಂದಲೇ ಇದು ಮನುಷ್ಯರು ಬಲಹೀನರಾಗಿ ಪಾಪವು ಅಲ್ಲಲ್ಲಿ ಪ್ರವೇಶ ಮಾಡಿರುವ ಕಲಿಯುಗಕ್ಕೋಸುಗವೇ ಹೇಳಲ್ಪಟ್ಟಿರುವದೆಂದು ಸ್ಪಷ್ಟಪಡುವದು.

ಏಕೆಂದರೆ ಧರ್ಮಭಾವವು ಪೂರ್ಣವಾಗಿರುವ ಕಾಲದಲ್ಲಿ ಯಾರೂ ಅಸದಾ ಚಾರವುಳ್ಳವರಾಗಿರುವದೇ ಇಲ್ಲ.

ತಏವಹಿತ್ರಯೋಲೋಕಾಸ್ತ ಏವತ್ರಯ ಆಶ್ರಮಾಃ |
ತಏವಹಿತ್ರಯೋವೇದಾಸ್ತ ಏವೋಕ್ತಾಸ್ತ್ರಯೋಽಗ್ನಯಃ ||
ಪಿತಾವೈಗಾರ್ಹ್ಯಪತ್ಯೋಽಗ್ನಿರ್ಮಾತಾಗ್ನಿರ್ದಕ್ಷಿಣಃಸ್ಮೃತಃ|
ಗುರುರಾಹವನೀಯಸ್ತು ಸಾಗ್ನಿತ್ರೈತಾಗರೀಯಸೀ ||
ತ್ರಿಷ್ವಪ್ರಮಾದ್ಯನ್ನೇತೇಷುತ್ರೀನ್‌ಲೋಕಾನ್‌ವಿಜಯೇದ್ಗೃಹೀ |
ದೀಪ್ಯಮಾನಸ್ಸ್ವವಪುಷಾದೇವವದ್ದಿವಿಮೋದತೆ ||

* * * * *

ತ್ರಿಷ್ವೇತೇಷ್ವಿತಿಕೃತ್ಯಂಹಿಪುರುಷಸ್ಯಸಮಾಪ್ಯತೆ |
ಏಷಧರ್ಮಃಪರಸ್ಸಾಕ್ಷಾದುಪಧರ್ಮೋಽನ್ಯಉಚ್ಯತೆ ||

ತಾಯಿ, ತಂದೆ, ಆಚಾರ್ಯ ಇವರೇ ಮೂರುಲೋಕಗಳು. ಇವರೇ ಮೂರುಆಶ್ರಮಗಳು, ಇವರೇ ಮೂರು ವೇದಗಳು, ಮತ್ತು ಇವರೇ ಮೂರು ಅಗ್ನಿಗಳು. ತಂದೆಯೇ ಗಾರ್ಹಪತ್ಯವೆಂಬ ಅಗ್ನಿಯು. ತಾಯಿಯೇ ದಕ್ಷಿಣಾಗ್ನಿಯು. ಆಚಾರ್ಯನೇ ಆಹವನೀಯಾಗ್ನಿ. ಈ ಮೂರು ಅಗ್ನಿಗಳೂ ಶ್ರೇಷ್ಠವಾದವುಗಳು ಈ ಮೂರರಲ್ಲಿಯೂ ನಿರಂತರ ಧ್ಯಾನವನ್ನಿಟ್ಟಿರುವ ಗೃಹಸ್ಥನು ದೇವತೆಗಳಂತೆ ತನ್ನ ಈ ಶರೀರದಲ್ಲಿಯೇ ಸ್ವರ್ಗಸುಖವನ್ನು ಅನುಭವಿಸುವನು. ಈ ಮೂರನ್ನೂ ಶುಶ್ರೂಷೆಮಾಡುವದರಿಂದಲೇ ಮಾನವನು ಸರ್ವಕರ್ಮಗಳನ್ನೂ ಮಾಡಿದವನಾಗುವನು. ಆದುದರಿಂದ ಇದನ್ನು ಉತ್ತಮ ಧರ್ಮವೆಂತಲೂ ಉಳಿದವುಗಳನ್ನು ಉಪಧರ್ಮಗಳೆಂತಲೂ ತಿಳಿಯಬೇಕು.

ಕೊನೆಯ ಶ್ಲೋಕದಲ್ಲಿ "ತಾಯಿ, ತಂದೆ, ಆಚಾರ್ಯ ಇವರುಗಳ ಶುಶ್ರೂಷೆಯನ್ನು ಮಾಡುವುದೊಂದರಿಂದಲೇ ಮನುಷ್ಯನು ಸರ್ವ ಧರ್ಮಾಚರಣವನ್ನು ಮಾಡಿದವನಾಗುತ್ತಾನೆ" ಎಂದು ಹೇಳಿರುವದು. ಇದಕ್ಕೆ ತಾಯಿ, ತಂದೆ, ಆಚಾರ್ಯ ಇವರುಗಳ ಸೇವೆಯನ್ನು ಮಾಡಿದಮೇಲೆ ಇನ್ನು ಯಾವ ಧರ್ಮವನ್ನು ಮಾಡಬೇಕಾಗಿಲ್ಲ ಎಂಬುವದೇ ಇದರ ತಾತ್ಪರ್ಯವೆಂದು ತಿಳಿಯಬಾರದು. ತಾಯಿ, ತಂದೆ, ಆಚಾರ್ಯ, ಇವರುಗಳ ಸೇವೆಯನ್ನು ಮಾಡುತ್ತಿದ್ದು ಇತರ ಧರ್ಮಗಳನ್ನು ಆಚರಿಸುತ್ತಿರಬೇಕು. ಧರ್ಮಸಾಧನಕ್ಕಾಗಿ ತಾಯಿ, ತಂದೆ, ಆಚಾರ್ಯ ಇವರುಗಳನ್ನು ಉಪೇಕ್ಷೆಮಾಡಿ ಅವರ ಸೇವೆಗೆ ಕುಂದನ್ನು ತರಬಾರದು. ಏಕೆಂದರೆ ಇವರನ್ನು ಉಪೇಕ್ಷಿಸಿ ಆಚರಿಸಿದ ಇತರ ಧರ್ಮಗಳೆಲ್ಲವೂ ವ್ಯರ್ಥವಾಗುವದೆಂಬುವದೇ ಅಭಿಪ್ರಾಯವು.

ಹಾಗೆಯೇ ಎಲ್ಲಾ ಧರ್ಮಗಳಿಗಿಂತಲೂ ಈ ಮೂವರ ಸೇವೆಯೇ ಉತ್ತಮಧರ್ಮವೆಂದು ಹೇಳಿರುವದಕ್ಕೆ ಇವರ ಸೇವೆಯನ್ನು ಉತ್ತಮರೀತಿಯಿಂದ ನಡೆಸಿಕೊಂಡು ಇತರ ಧರ್ಮಗಳನ್ನೂ ಮಾಡುವ ಸಾಮರ್ಥ್ಯವಿಲ್ಲದಿದ್ದರೆ ಇವರ ಸೇವೆಯನ್ನೇ ಮಾಡುವದು ಸಾಧುವಾದುದು. ಇದರಿಂದಲೇ ಸರ್ವಧರ್ಮವೂ ಪಾಲಿತವಾಗುವದು. ಇವರ ಸೇವೆಯನ್ನು ಬಿಟ್ಟು ತನ್ನ ಉನ್ನತಿಗಾಗಿ ಇತರ ಧರ್ಮವನ್ನಾಚರಿಸುವದರಲ್ಲಿ ತತ್ಪರನಾಗಬಾರದು ಎಂಬುವದೇ ತಾತ್ಪರ್ಯವು.

ಕೃತಯುಗದ ಮನುಷ್ಯರಿಗೆ ಈ ವಿಧವಾದ ಧರ್ಮೋಪದೇಶವು ಬೇಕೇ! ಎಂದು ವಿಚಾರಮಾಡಬೇಕು. ಆ ಕಾಲದ ಮಾನವರು ತಾಯಿತಂದೆಗಳನ್ನೂ ಆಚಾರ್ಯರನ್ನೂ ಅಲಕ್ಷ್ಯಮಾಡಿ ಧರ್ಮೋಪಾರ್ಜನಕ್ಕಾಗಿ ಹೋಗುತ್ತಿದ್ದರೆ? ಸ್ವಭಾವವಾಗಿಯೇ ಆ ಕಾಲದವರ ಮನಸ್ಸು ಅಧರ್ಮದ ಕಡೆಗೆ ಹೋಗುತ್ತಿದ್ದಿಲ್ಲವೆಂಬುವದನ್ನು ಮನುಸ್ಮೃತಿಯಲ್ಲಿಯೇ ಹೇಳಿರುವದು.

ಆದುದರಿಂದ ಕೃತಯುಗದ ಮನುಷ್ಯರಿಗೆ ಈ ವಿಧವಾದ ಧರ್ಮೋಪದೇಶವು ನಿರರ್ಥಕವೇ ಸರಿ. ಅಧರ್ಮಗಳ ಬಲವು ಹೆಚ್ಚಿ ಜನಗಳ ಧರ್ಮಜ್ಞಾನವು ದುರ್ಬಲವಾಗುತ್ತಿರುವ ಕಾಲಕ್ಕಾದರೆ ಈ ಧರ್ಮೋಪದೇಶವು ಸಾರ್ಥಕವಾಗುವದು. ನಾವು ಪ್ರತಿದಿನವೂ ಅಧರ್ಮವು ವೃದ್ಧಿಯಾಗುತ್ತಿರುವದನ್ನು ನೋಡುತ್ತಲೇ ಇದ್ದೇವೆ. ತಾಯಿತಂದೆಗಳನ್ನು ತಿರಸ್ಕರಿಸಿ ಅನೇಕ ಜನರು ತಮ್ಮ ಮನಸ್ಸಿಗೆ ಬಂದಂತೆ ಆಚರಿಸುವದರಿಂದಲೇ ತಮ್ಮ ಉನ್ನತಿಯುಂಟಾಗುವದೆಂದು ತಿಳಿದು

ಕೊಂಡು ಅದರ ಆವೇಶದಲ್ಲಿ ಬಿದ್ದು ಅಥವಾ ತಮ್ಮ ಮಿತ್ರರ ಮಾತಿಗೆ ಕಟ್ಟು ಬಿದ್ದು ನಾನಾವಿಧ ಹೊಸ ಮಾರ್ಗಗಳನ್ನು ಅವಲಂಬಿಸುತ್ತಿದಾರೆ. ನಿಜವಾಗಿಯೂ ಇಂತಹ ಜನರಿಗೇನೇ ಉಪದೇಶವು. ಸ್ತ್ರೀಯರ ಸ್ವಾತಂತ್ರ್ಯವು ಹೆಚ್ಚಿ ಪುರುಷರು ಸ್ತ್ರೀಯರ ವಶವರ್ತಿಗಳಾದಾಗ ಕಲಿಯುಗದ ಧರ್ಮವು ಪರಮೋನ್ನತಿಯನ್ನು ಹೊಂದುವದು. ಆಗ ಈ ಶ್ಲೋಕಗಳು ಕಲಿಯುಗಕ್ಕಾಗಿಯೇ ಹೊರಟವುಗಳಲ್ಲದೆ ಕೃತಯುಗದ ಧರ್ಮಾತ್ಮರುಗಳಿಗಾಗಿ ಬರೆದವುಗಳಲ್ಲವೆಂಬುವದು ಸ್ಪಷ್ಟವಾಗಿ ತಿಳಿದುಬರುವದು.

ಪಕ್ಷಪಾತವನ್ನು ಬಿಟ್ಟು ನೋಡುವದಾದರೆ ಮನುಸ್ಮೃತಿಯಲ್ಲಿ ಸರ್ವಕಾಲಕ್ಕೂ ಸರ್ವಾವಸ್ಥೆಗೂ ಉಪಯುಕ್ತವಾದ ಧರ್ಮೋಪದೇಶಗಳಿರುವವೆಂಬುದನ್ನು ಅವಶ್ಯವಾಗಿಯೂ ಒಪ್ಪಬೇಕಾಗುವದು. ಪೂರ್ವಕಾಲದ ಮಾನ್ಯವಿದ್ವಾಂಸರುಗಳೂ ಕೂಡ ಮನುಸ್ಮೃತಿಯಲ್ಲಿ ಕಲಿಕಾಲಕ್ಕೋಸ್ಕರ ವಿಧಿಯನ್ನು ತೋರಿಸಿರುವರು.

"ತತಃಪ್ರಭೃತಿಯೋಮೋಹಾತ್ಪ್ರಮೀತಪತಿಕಾಂಸ್ತ್ರಿಯಂ |
ನಿಯೋಜಯತ್ಯಪತ್ಯಾರ್ಥಂತಂವಿಗರ್ಹನ್ತಿಸಾಧವಃ ||"

ಇದಕ್ಕೆ ಕುಲ್ಲೂಕಭಟ್ಟರು ವ್ಯಾಖ್ಯಾನಮಾಡಿರುವರು.

'ತತಇತಿ ವೇನಕಾಲಾತ್ಪ್ರಭೃತಿ ಯೊ ಮೃತಭರ್ತೃಕಾಂಸ್ತ್ರಿಯಂ ಶಾಸ್ತ್ರಾರ್ಥಾಜ್ಞಾನಾದಪತ್ಯನಿಮಿತ್ತಂ ದೇವರಾದೌನಿಯೋಜಯತಿ ತಂಸಾಧವೊ ನಿಯತಂಗರ್ಹಯಂತಿ ಅಯಂಚಸ್ತ್ರೋಕ್ತನಿಯೋಗ ನಿಷೇಧಕಲಿಯುಗವಿಷಯಃ ತದಾಹಬೃಹಸ್ಪತಿ.

ಉಕ್ತೋನಿಯೋಗೋಮನುನಾನಿಷಿದ್ಧಸ್ಸ್ವಯಮೇವಂ |
ಯುಗಹ್ರಾಸಾದಶಕ್ಯೋಯಂಕತುಮನ್ಯೈರ್ವಿಧಾನತಃ||
ತಪೋಜ್ಞಾನಸಮಾಯುಕ್ತಾಃಕೃತತ್ರೇತಾಯುಗೇನರಾಃ |
ದ್ವಾಪರೇಚಕಲೌನೃಣಾಂಶಕ್ತಿಹಾನಿರ್ಹಿನಿರ್ಮಿತಾ ||
ಅನೇಕಧಾಕೃತಾಃಪುತ್ರಾಋಷಿಭಿರ್ಯೈಃಪುರಾತನೈಃ||
ನಶಕ್ಯತೇಧುನಾಕರ್ತುಂಶಕ್ತಿಹೀನೈರಿದಂತನೈಃ ||

ಅತೋಯದ್ಗೋವಿಂದರಾಜೇನ ಯುಗವಿಶೇಷವ್ಯವಸ್ಥಾಮಜ್ಞಾತ್ವಾ ಸರ್ವದೈವಸಂತಾನಾಭಾವೇನಿಯೋಗಾದನಿಯೋಗ ಪಕ್ಷಶ್ರೈಯೊನಿತಿಸ್ವಮನೀಷಯಾಕಲ್ಪಿತಂ ತನ್ಮನಿವ್ಯಾಖ್ಯಾವಿರೋಧಾನ್ನಾದ್ರಿಯಾಮಹೆ

ಪ್ರಾಯಶೋಮನುವಾಕ್ಯೇಷುಮುನಿವ್ಯಾಖ್ಯಾಮಹಂಲಿಖೇ |
ನಾಪರಾಧ್ಯೋಽಸ್ಮಿ ವಿದುಷಾಂಕ್ಷಾಂಹಸರ್ವವಿದಃಕುಧೀಃ ||

ವಿಧವಾಸ್ತ್ರೀಯು ಸಂತಾನಹೀನಳಾಗಿದ್ದರೆ ನಿಯೋಗ ಧರ್ಮಾನುಸಾರವಾಗಿ ದೇವ
ರನೇ ಮೊದಲಾದವರ ಮೂಲಕ ಸಂತಾನವನ್ನು ಪಡೆಯಬಹುದೆಂಬ ವಿಧಿಯನ್ನು
ಕೊಟ್ಟು ಮನುವು ಪುನಃ ತಾನೇ ಇದನ್ನು ಸತ್ಪುರುಷರು ನಿಂದಿಸುವರೆಂತಲೂ,
ಇದು ಪಶುಧರ್ಮವೆಂತಲೂ, ವೇನರಾಜನಕಾಲದಿಂದ ಆಚರಣೆಗೆ ಬಂದಿರುವದೆಂ
ತಲೂ, ಹೇಳಿರುವನು. ಬೃಹಸ್ಪತಿಗಳು ಕೃತತ್ರೇತಾದ್ವಾಪರಗಳಲ್ಲಿ ಮನುಷ್ಯರಿಗೆ
ತಪಸ್ಸೂ ಜ್ಞಾನವೂ ಇದ್ದವು. ಯುಗವು ಕಳೆದಹಾಗೆಲ್ಲಾ ಶಕ್ತಿಯು ಕಡಮೆ
ಯಾಗುತ್ತ ಕಲಿಯುಗದಲ್ಲಿ ಮನುಷ್ಯರು ಶಕ್ತಿಹೀನರಾಗಿರುವರು. ಆದುದರಿಂದ
ಈಗಿನ ಜನಗಳು ಕ್ಷೇತ್ರಜಾದಿಸಂತಾನೋತ್ಪಾದನದಲ್ಲಿ ಅಸಮರ್ಥರಾಗಿರುವರು.
ಈ ಕಾರಣದಿಂದಲೇ ಔರಸನು ವಿನಾ ಇತರ ಸಂತಾನಗಳು ನಿಷೇಧಿಸಲ್ಪಟ್ಟಿ
ವೆ. ಮನುವು ನಿಯೋಗವನ್ನು ವೈಧವೆಂದು ಹೇಳಿ ಪುನಃ ಅದನ್ನು ನಿಂದಿಸುವದ
ರಿಂದ ಇದು ಕಲಿಯುಗಕ್ಕೆಂದೇ ಸ್ಪಷ್ಟಪಡುವದು. ಗೋವಿಂದರಾಜರು ಯುಗ
ವಿಶೇಷದ ವ್ಯವಸ್ಥೆಯನ್ನು ತಿಳಿದುಕೊಳ್ಳದೆ ನಿಯೋಗಧರ್ಮವನ್ನು ಆಚರಿಸುವದ
ಕ್ಕಿಂತಲೂ ಬಿಡುವದೇ ಎಲ್ಲಾ ಕಾಲಕ್ಕೂ ಶ್ರೇಷ್ಠವೆಂದು ತೋರಿಸಿರುವರು.
ಇದು ಬೃಹಸ್ಪತಿಗಳ ವ್ಯಾಖ್ಯಾನಕ್ಕೆ ವಿರುದ್ಧವಾಗಿರುವದು. ಆದುದರಿಂದ
ನಾನು ಮುನಿವ್ಯಾಖ್ಯಾನಾನುಸಾರವಾಗಿ ಬರೆದಿರುವೆನು. ಸಕಲ ಶಾಸ್ತ್ರಗಳ
ಲ್ಲಿಯೂ ಪ್ರವೀಣರಾದ ಮುನಿಗಳಿಗೂ ನಮಗೂ ಬಹಳ ವ್ಯತ್ಯಾಸವಿರುವದು.
ಆದಕಾರಣ ಗೋವಿಂದರಾಜರ ವ್ಯಾಖ್ಯಾನವನ್ನು ಅನಾದರಿಸಿದ್ದರಲ್ಲಿ ನನ್ನ ದೋ
ಷವೇನೂ ಇರುವದಿಲ್ಲ.' ಇದೇ ಕುಲ್ಲೂಕಭಟ್ಟರ ವ್ಯಾಖ್ಯಾನವು. ಹೀಗೆ
ಬೃಹಸ್ಪತಿಗಳ ವ್ಯಾಖ್ಯಾನದಿಂದಲೂ ಮನುಸ್ಮೃತಿಯಲ್ಲಿ ಎಲ್ಲಾ ಯುಗದ ಧರ್ಮ
ವೂ ಇರುವದೆಂದು ಸ್ಪಷ್ಟಪಡುವದು.

ಪಂಡಿತ ಈಶ್ವರಚಂದ್ರರೂ ಸಹ ನಾರದ ಸಂಹಿತೆಯನ್ನು ಮನುಸಂಹಿತೆಗೆ
ಸಮಾನವೆಂದು ನಿರ್ಧರಿಸುವ ಪ್ರಯತ್ನದಲ್ಲಿ ನಾರದರ ವಾಕ್ಯವನ್ನೇ ಪ್ರಮಾಣ
ವಾಗಿ ಕೊಟ್ಟಿರುವರು. ಯಾವುದೆಂದರೆ —"ಭಗವಾನ್ ಮನುವು ಸಾವಿರ ಅಧ್ಯಾ
ಯಗಳಲ್ಲಿ ಈ ಶಾಸ್ತ್ರವನ್ನು ರಚಿಸಿ ಇಷ್ಟು ದೊಡ್ಡ ಗ್ರಂಥವನ್ನು ಮನುಷ್ಯರಿಗೆ
ಅಭ್ಯಾಸಮಾಡುವುದೆಂದರೆ ಬಹಳ ಕಷ್ಟವಾಗುವದೆಂದು ಯೋಚಿಸಿ ಅದರ ಸಾರ
ವನ್ನು ಹನ್ನೆರಡುಸಾವಿರ ಶ್ಲೋಕಗಳಲ್ಲಿ ಸಂಗ್ರಹಿಸಿದನು. ಆ ಸಂಕ್ಷಿಪ್ತ ಗ್ರಂಥ

ವನ್ನು ಭೃಗುವಂಶದವನಾದ ಸುಮತಿಗೆ ಕೊಟ್ಟನು. ಸುಮತಿಯು ದೇವರ್ಷಿಗ ಳಿಂದ ಕಲಿತು ಯುಗಹ್ರಾಸದೊಂದಿಗೆ ಮನುಷ್ಯರ ಶಕ್ತಿಯೂ ಕಡಮೆಯಾಗುವ ದೆಂದು ತಿಳಿದು ನಾಲ್ಕುಸಾವಿರ ಶ್ಲೋಕಗಳಲ್ಲಿ ಸಂಕ್ಷೇಪಿಸಿದನು. ಮನುಷ್ಯರು ಆ ಸುಮತಿಕೃತಧರ್ಮಶಾಸ್ತ್ರವನ್ನೇ ಓದುತ್ತಿದಾರೆ. ಹೀಗೆ ಪಂಡಿತ ಈಶ್ವರಚಂ ದ್ರರು ನಾರದಸಂಹಿತೆಯ ವಚನವನ್ನು ಎತ್ತಿ ಬರೆದಿರುವರು. ಇದರಲ್ಲಿ ಸ್ವಲ್ಪ ವೈಲಕ್ಷಣ್ಯವು ಇರುವದು. ಅದರಿಂದ ತಾತ್ಪರ್ಯದಲ್ಲಿಯೂ ವಿಲಕ್ಷಣಭಾವವು ಒದಗಿರುವದು. ಕಲ್ಕತ್ತೆಯ ಏಷ್ಯಾಟಿಕ್ ಸೊಸೈಟಿಯ ಮೂಲಕ ಮುದ್ರಿತವಾ ಗಿರುವ ನಾರದಸಂಹಿತೆಯಿಂದ ಸ್ವಲ್ಪಭಾಗವನ್ನು ಎತ್ತಿ ಇಲ್ಲಿ ಬರೆಯುವೆವು. ಅದ ನ್ನು ಓದುವದರಿಂದ ಸುಮತಿಯಿಂದ ಸಂಗ್ರಹಿಸಲ್ಪಟ್ಟು ಈಗ ಪ್ರಚಾರದಲ್ಲಿರುವ ಧರ್ಮಸಂಹಿತೆಯು ಈ ಯುಗಕ್ಕಾಗಿ ಸಂಗ್ರಹಿಸಟ್ಟಿರುವದೇ ಅಲ್ಲವೇ ಎಂಬಂಶವ ನ್ನು ಪಾಠಕರು ವಿಚಾರಮಾಡಿ ನೋಡಬಹುದು.

"ಇಹಹಿಭಗವಾನ್ ಮನುಃಪ್ರಥಮಂಸರ್ವಭೂತಾನುಗ್ರಹಾರ್ಥಂ ಆಚಾರ ಸ್ಥಿತಿ ಹೇತುಭೂತಂ ಶಾಸ್ತ್ರಂಚಕಾರ ಯತ್ರ ಲೋಕಸೃಷ್ಟಿಃ, ಭೂತಪ್ರವಿಭಾಗಃ, ಸದ್ದೇಶಪ್ರಮಾಣಂ, ವರ್ಷಲಕ್ಷಣಂ, ವೇದವೇದಾಂಗಯಜ್ಞವಿಧಾನಂ, ಆಚಾ ರಃ" ವ್ಯವಹಾರಃ, ಕಂಟಕಶೋಧನಂ, ರಾಜವೃತ್ತಂ, ವರ್ಣಾಶ್ರಮವಿಭಾಗಃ, ವಿವಾಹನ್ಯಾಯಃ, ಸ್ತ್ರೀಪುಂಸವಿಕಲ್ಪಃ, ಭಕ್ಷ್ಯಾಭಕ್ಷ್ಯ ಲಕ್ಷಣಂ, ವಿಕ್ರೇಯಮೀ ಮಾಂಸಾ, ಪಾತಕಭೇದಾಃ, ಸ್ವರ್ಗ ನರಕಾನುದರ್ಶನಂ, ಪ್ರಾಯಶ್ಚಿತ್ತಾನಿ, ಉಪ ನಿಷದಃ ರಹಸ್ಯಸ್ಥಾನಾನಿ, ಏವರಿಚತುರ್ವಿಂಶತಿ ಪ್ರಕರಣಾನಿ, ತದೇತದತ್ರಶ್ಲೋಕ ಸಹಸ್ರೇಣ ಸಾತೀತಿನಾ ಅಧ್ಯಾಯಸಹಸ್ರೇಣಚ ಭಗವಾನ್ ಮನುರುಪನಿಬಧ್ಯ ದೇವರ್ಷಯೆ ನಾರದಾಯಪ್ರಾಯಚ್ಛತ್, ಸಚತಸ್ಮಾದಧೀತ್ಯಮಹತ್ವಾನ್ನಾಯಂ ಗ್ರಂಥಸ್ಸುಕರೋಮನುಷ್ಯೈರವಧಾರಯಿತುಮಿತಿ ದ್ವಾದಶಭಿಸ್ಸಹಸ್ರೈಸ್ಸಂಚಿ ಕ್ಷೇಪ, ತಚ್ಚ ಮಹರ್ಷಯೆ ಮಾರ್ಕಂಡೇಯಾಯ ಪ್ರಾಯಚ್ಛತ್, ಸಚತಸ್ಮಾದಧೀ ತ್ಯತಥೈವಾಯುಶ್ಶಕ್ತಿಮಪೇಕ್ಷ್ಯ ಮನುಷ್ಯಾಣಾಮಷ್ಟಾಭಿ, ಸ್ಸಹಸ್ರೈಸ್ಸಂಚಿಕ್ಷೇ ಪ, ತಂಚಸುಮತಯೆ ಭಾರ್ಗವಾಯಪ್ರಾಯಚ್ಛತ, ಸುಮತಿರಪಿ ಭಾರ್ಗವಸ್ತಸ್ಮಾ ದಧೀತ್ಯತಥೈವಾಯುಹ್ರಾಸಾದಲ್ಪೀಯಸೀ ಶಕ್ತಿರ್ಮನುಷ್ಯಾಣಾಮಿತಿಚತುರ್ಭಿಸ್ಸ ಹಸ್ರೈಸ್ಸಂಚಿಕ್ಷೇಪ."

ಭಗವಾನ್‌ಮನುವು ಪ್ರಪಂಚದಲ್ಲಿ ಸಕಲಪ್ರಾಣಿಗಳನ್ನೂ ಅನುಗ್ರಹಿಸುವದ ಕ್ಕಾಗಿ ಆಚಾರಸ್ಥಿತಿಗೆ ಕಾರಣವಾದ ಶಾಸ್ತ್ರವನ್ನು ರಚಿಸಿದನು. ಅದರಲ್ಲಿ ಜಗ

ತ್ತಿನ ಸೃಷ್ಟಿ, ಪ್ರಾಣಿಗಳ ವಿಭಾಗ ಶ್ರೇಷ್ಠದೇಶದ ಪ್ರಮಾಣ, ವರ್ಣಲಕ್ಷಣ, ವೇದ ವೇದಾಂಗ ಮತ್ತು ಯಜ್ಞಗಳ ವಿಧಾನ, ಆಚಾರವ್ಯವಹಾರ, ಕಂಟಕಶೋಧನ ರಾಜವ್ಯವಹಾರ, ವರ್ಣಾಶ್ರಮ ವಿಭಾಗ, ವಿವಾಹದರೀತಿ, ಸ್ತ್ರೀಪುರುಷರಭೇದ, ದಾರಪರಿಗ್ರಹಕ್ರಮ, ಶ್ರಾದ್ಧವಿಧಾನ ಶೌಚಾಚಾರಗಳಭೇದ, ಭಕ್ಷ್ಯಾಭಕ್ಷ್ಯಲಕ್ಷಣ ಮಾರುವದಕ್ಕೆ ಯೋಗ್ಯವಾದದ್ದು ಮತ್ತು ಅಯೋಗ್ಯವಾದದ್ದು ಇವುಗಳ ವಿಚಾರ, ಪಾತಕಗಳಭೇದ, ಸ್ವರ್ಗನರಕಗಳ ವರ್ಣನ, ಪ್ರಾಯಶ್ಚಿತ್ತ, ಉಪನಿಷದ್ರಹಸ್ಯಸ್ಥಾನ, ಈ ಪ್ರಕಾರವಾಗಿ ಇಪ್ಪತ್ತುನಾಲ್ಕು ಪ್ರಕರಣಗಳಲ್ಲಿ ಒಂದು ಲಕ್ಷ ಶ್ಲೋಕಗಳುಳ್ಳ ಗ್ರಂಥವನ್ನು ಮಾಡಿದನು. ಅದನ್ನು ಸಾವಿರ ಅಧ್ಯಾಯಗಳನ್ನಾಗಿ ಮಾಡಿ ನಾರ ದರಿಗೆ ಕೊಟ್ಟನು. ನಾರದರು ಮನುಷ್ಯರಿಗೆ ಸಹಜವಾಗಿ ನೆನಪಿನಲ್ಲಿರುವದಕ್ಕಾಗಿ ಅದರ ಸಾರವನ್ನು ಎತ್ತಿ ಹನ್ನೆರಡು ಸಾವಿರ ಶ್ಲೋಕಗಳ ಸಂಹಿತೆಯನ್ನು ಮಾಡಿ ಮಾರ್ಕಂಡೇಯರಿಗೆ ಕೊಟ್ಟರು. ಮಾರ್ಕಂಡೇಯರೂ ಕೂಡ ಯುಗಕ್ರಮದಿಂದ ಮನುಷ್ಯರ ಆಯಸ್ಸಿನಲ್ಲಿಯೂ ಶಕ್ತಿಯಲ್ಲಿಯೂ ಕ್ಷೀಣತೆಯು ಒದಗುತ್ತಿರುವದನ್ನು ನೋಡಿ ಅದನ್ನು ಎಂಟುಸಾವಿರ ಶ್ಲೋಕಗಳಲ್ಲಿ ಸಂಗ್ರಹಿಸಿ ಭೃಗುವಂಶದ ಸುಮತಿ ಎಂಬುವರಿಗೆ ಕಲಿಸಿದರು. (ಇದನ್ನು ವೃದ್ಧ ಮನು ಅಥವಾ ಬೃಹನ್ಮನು ಎಂದು ಹೇಳುತ್ತಾರೆ.) ಇದರಮೇಲೆ ಈ ಎಂಟುಸಾವಿರ ಶ್ಲೋಕಗಳನ್ನೂ ಕೂಡ ಓ ದುವ ಶಕ್ತಿಯೂ ಆಯುಸ್ಸೂ ಸಹ ಯುಗಾನುಸಾರವಾಗಿ ಮನುಷ್ಯರಲ್ಲಿ ಕ್ಷೀಣ ವಾಗುತ್ತಿರುವದನ್ನು ನೋಡಿ ಸುಮತಿಯು ಅದರಲ್ಲೂ ಸಾರವನ್ನು ತೆಗೆದು ಅಲ್ಪಾ ಯುರ್ಜನಗಳಿಗಾಗಿ ನಾಲ್ಕು ಸಾವಿರ ಶ್ಲೋಕಗಳ ಸಂಹಿತೆಯನ್ನು ರಚಿಸಿದನು. ಈಗ ಆ ಸುಮತಿಕೃತವಾದ ಮನುಸಂಹಿತೆಯೇ ನಮ್ಮಲ್ಲಿ ಪ್ರಚಲಿತವಾಗಿರುವದು.

ಇದರಿಂದ ಈ ಮನುಸಂಹಿತೆಯಲ್ಲಿ ಹೇಳಿರುವ ಧರ್ಮವು ಶಕ್ತಿಹೀನರಾಗಿಯೂ ಅಲ್ಪಾಯುಗಳಾಗಿಯೂ ಇರುವ ಮನುಷ್ಯರಿಗಾಗಿಯೇ ಎಂಬುವದು ಸ್ಪಷ್ಟಪಡು ವದು. ಆದುದರಿಂದ ಮನುಸ್ಮೃತಿಯು ಕೇವಲ ಕೃತಯುಗಕ್ಕಾಗಿಯೇ ಏರ್ಪಟ್ಟ ದ್ದೆಂಬಂಶವು ಪ್ರಮಾಣಶೂನ್ಯವಾದುದು. ನಾರದರು ಸಂಗ್ರಹಿಸಿದ ಹನ್ನೆರಡು ಸಾವಿರಶ್ಲೋಕಗಳ ಮನುಸಂಹಿತೆಯನ್ನು ಒಂದುವೇಳೆ ಕೃತಯುಗಕ್ಕೆಂದು ಹೇಳಿದ ರೂ ಹೇಳಬಹುದು. ಅದರಮೇಲೆ ಮಾರ್ಕಂಡೇಯರು ಅದರಲ್ಲಿಯೂ ಸಂಗ್ರಹಿಸಿ ಎಂಟು ಸಾವಿರ ಶ್ಲೋಕಗಳಲ್ಲಿ ರಚಿಸಿದ ಮನುಸ್ಮೃತಿಯು ಇತರ ಯುಗಗಳಿಗೆಂದು ಹೇಳಬಹುದು. ಅನಂತರದಲ್ಲಿ ಯುಗಹ್ರಾಸಕ್ಕೆ ತಕ್ಕಂತೆ ಮನುಷ್ಯರು ಹೀನಬಲರಾ ಗಿಯೂ ಶಕ್ತಿಹೀನರಾಗಿಯೂ ಆಗುತ್ತಿರುವದನ್ನು ನೋಡಿ ಅದನ್ನು ಸಂಕ್ಷೇಪಿಸಿ ಸುಮತಿಯು ನಾಲ್ಕುಸಾವಿರ ಶ್ಲೋಕಗಳಲ್ಲಿ ರಚಿಸಿರುವದು ಅದರ ಮುಂದಿನ ಜನಗ ಳಿಗೆಂದು ಸ್ಪಷ್ಟಪಡುವದು.

ನಾರದರ ಈ ಮಾತಿನಿಂದ ಕೃತಯುಗವನ್ನಾರಂಭಿಸಿ ಯುಗಯುಗಾಂತರದ ವರೆಗೂ ಈ ಮನುಸಂಹಿತೆಯು ಧರ್ಮಶಾಸ್ತ್ರರೂಪದಿಂದ ನಡೆದುಬರುತ್ತಲಿದೆ ಯುಗಯುಗಾಂತರಗಳಿಗಾಗಿ ಬೇರೆಬೇರೆ ಧರ್ಮಶಾಸ್ತ್ರಗಳಿರುವುದಿಲ್ಲ. ಸರ್ವ ಧರ್ಮಶಾಸ್ತ್ರಗಳೂ ಸರ್ವಕಾಲಕ್ಕಾಗಿಯೂ ಏರ್ಪಟ್ಟಿವೆ. ಬೇರೆಬೇರೆ ಯುಗಗಳಿಗಾಗಿ ಬೇರೆಬೇರೆ ಧರ್ಮಶಾಸ್ತ್ರಗಳೆಂಬುವುದು ಕೇವಲ ಭ್ರಮವೇ ಸರಿ.

" ಧರ್ಮೈಕತಾನಾಃ ಪುರುಷಾಯದಾಸನ್ ಸತ್ಯವಾದಿನಃ|
ತದಾ ನ ವ್ಯವಹಾರೋಽ ಭೂನ್ನದ್ವೇಷೋನಾಪಿಮತ್ಸರಃ ||
ನಷ್ಟೇ ಧರ್ಮೇ ಮನುಷ್ಯಾಣಾಂ ವ್ಯವಹಾರಃ ಪ್ರವರ್ತತೆ |
ದ್ರಷ್ಟಾಚ ವ್ಯವಹಾರಾಣಾಂ ರಾಜಾ ದಂಡಧರಸ್ಸ್ಮೃತಃ||

ಮನುಷ್ಯರಲ್ಲಿ ಧರ್ಮದ ಬಲವು ಪೂರ್ಣವಾಗಿದ್ದು ಮನುಷ್ಯರು ಸತ್ಯವಾದಿಗಳಾಗಿದ್ದ ಕಾಲದಲ್ಲಿ ದ್ವೇಷವೂ ಮಾತ್ಸರ್ಯವೂ ಇರಲಿಲ್ಲವಾದುದರಿಂದ ಕಾನೂನುಗಳ ಅವಶ್ಯಕತೆಯಾಗಲಿ ನ್ಯಾಯಾಲಯಗಳ ಅವಶ್ಯಕತೆಯಾಗಲಿ ಇರಲಿಲ್ಲ. ಮನುಷ್ಯರು ಧರ್ಮವಿಹೀನರಾಗುತ್ತ ಬಂದಮೇಲೆ ವ್ಯವಹಾರದ ಅವಶ್ಯಕತೆಯುಂಟಾಯಿತು. ಆಗ ರಾಜನು ದೋಷವನ್ನು ದೂರಮಾಡುವುದಕ್ಕಾಗಿ ದಂಡಧರನಾದನು. " ಎಂದು ನಾರದರು ಹೇಳಿರುವರು.

ಹೀಗಿರುವಾಗ ಮನುಧರ್ಮಶಾಸ್ತ್ರವು ಕೃತಯುಗಕ್ಕೆ ಮಾತ್ರವೆಂದು ಹೇಗೆ ಹೇಳಬಹುದು? ಎಲ್ಲರೂ ಧಾರ್ಮಿಕರಾಗಿದ್ದ ಕಾಲದಲ್ಲಿ ಅಧರ್ಮವನ್ನು ದೂರಮಾಡುವುದಕ್ಕಾಗಿ ದಂಡಧಾರಣದ ನಿಯಮವೇ ಬೇಕಾಗಿರಲಿಲ್ಲ. ಆದುದರಿಂದ ಮನುಸ್ಮೃತಿಯಲ್ಲಿ ವಿಸ್ತಾರವಾಗಿ ವ್ಯವಹಾರ ಪ್ರಕರಣದಲ್ಲಿ ಅವಿಹಿತ ಕಾರ್ಯಗಳಿಗಾಗಿ ಹೇಳಿರುವ ದಂಡವು ಕೃತಯುಗಕ್ಕೆ ಎಂದಿಗೂ ಆಗಲಾರದು. ಇದು ಅಧರ್ಮಬಹುಳವಾದ ಕಲಿಯುಗಕ್ಕೆಂಬುದಾಗಿಯೇ ತಿಳಿಯಬೇಕಾಗುವದು

ಹೀಗೆ ಮನುಧರ್ಮಶಾಸ್ತ್ರದಲ್ಲಿ ಸರ್ವ ಯುಗಕ್ಕೂ ಯೋಗ್ಯವಾದ ಧರ್ಮಗಳು ಸಂಪೂರ್ಣವಾಗಿ ವರ್ಣಿತಗಳಾಗಿವೆ. ಅಶೌಚ, ಪ್ರಾಯಶ್ಚಿತ್ತಾದಿಗಳೇ ಇದಕ್ಕೆ ಪ್ರತ್ಯಕ್ಷಪ್ರಮಾಣಗಳಾಗಿವೆ. ಇದುವರೆಗೂ ಶಾಸ್ತ್ರಜ್ಞರಾದ ಪಂಡಿತರುಗಳು ಸ್ವಚ್ಛಹೃದಯದಿಂದ ಇದನ್ನು ಪರಿಗ್ರಹಿಸಿ ಮನುಸ್ಮೃತಿಯ ಪ್ರಮಾಣದಿಂದಲೇ ಈ ಯುಗದ ಕರ್ತವ್ಯಗಳನ್ನು ನಿಶ್ಚಯಿಸುವರು.

ಒಂದು ವೇಳೆ, ಕಲಿಯುಗದ ವ್ಯವಹಾರದಲ್ಲಿರುವ ಧರ್ಮಗಳನ್ನು ಮನುಸ್ಮೃತಿಯಲ್ಲಿ ಹೇಳಿರುವುದಿಲ್ಲವೆಂದು ವಿದ್ಯಾಸಾಗರರು ತಮ್ಮ ಪುಸ್ತಕದಲ್ಲಿ ಬರೆದಿಲ್ಲ.

ನಾಲ್ಕು ಯುಗಗಳ ಧರ್ಮಗಳನ್ನೂ ಬೇರಬೇರೆಯಾಗಿ ಮನುಸ್ಮೃತಿಯಲ್ಲಿ ಹೇಳಿಲ್ಲವೆಂದು ಇಷ್ಟೇ ಬರೆದಿರುವರು, ಎಂದು ಹೇಳುವುದಕ್ಕೆ ಆಗುವುದಿಲ್ಲ. ಈ ಅಭಿಪ್ರಾಯವೇ ವಿದ್ಯಾಸಾಗರರಿಗೆ ಇದ್ದರೆ "ಕೃತಯುಗದಲ್ಲಿ ಕೇವಲ ಮನುಸ್ಮೃತಿಯೂ, ತ್ರೇತಾಯುಗದಲ್ಲಿ ಗೌತಮಸ್ಮೃತಿಯೂ, ದ್ವಾಪರದಲ್ಲಿ ಶಂಖಲಿಖಿತರ ಸ್ಮೃತಿಗಳೂ, ಕಲಿಯುಗದಲ್ಲಿ ಕೇವಲ ಪರಾಶರಸ್ಮೃತಿಯೂ ಮಾನ್ಯವಾಗುವ ಪಕ್ಷದಲ್ಲಿ ಇತರ ಋಷಿಗಳ ಧರ್ಮಶಾಸ್ತ್ರಗಳು ಯಾವ ಯುಗಕ್ಕೆ? ಎಂದು ಸಂದೇಹವು ಉಂಟಾಗುವದು. ಇದಕ್ಕೆ ಉತ್ತರವೇನೆಂದರೆ:— ಕ್ರಮವಾಗಿ ಮನು, ಗೌತಮ, ಶಂಖಲಿಖಿತ, ಪರಾಶರ ಇವರ ಧರ್ಮಶಾಸ್ತ್ರಗಳು ಕೃತ, ತ್ರೇತಾ, ದ್ವಾಪರ, ಕಲಿಯುಗಗಳ ಶಾಸ್ತ್ರಗಳಾಗಿವೆ. ಆಯಾಯ ಯುಗಗಳಿಗೆ ಆಯಾಯ ಧರ್ಮಶಾಸ್ತ್ರಗಳೇ ಪ್ರಧಾನ ಶಾಸ್ತ್ರಗಳು. ಉಳಿದ ಧರ್ಮಶಾಸ್ತ್ರಗಳ ವಚನಗಳಲ್ಲಿ ಯಾವಯಾವ ವಚನಗಳು ಈ ಪ್ರಧಾನಶಾಸ್ತ್ರಗಳಿಗೆ ವಿರುದ್ಧಗಳಾಗಿಲ್ಲವೋ ಅವುಗಳು ಆಯಾಯ ಯುಗಗಳಲ್ಲಿ ಸ್ವೀಕರಿಸತಕ್ಕವುಗಳು" ಎಂದು ತಮ್ಮ ಪುಸ್ತಕದಲ್ಲಿ ಬರೆಯುತ್ತಿರಲಿಲ್ಲ.

ಈ ಕಾರಣಗಳಿಂದ ವಿದ್ಯಾಸಾಗರರ ವಿಚಿತ್ರವಾದ ಸ್ವತಂತ್ರ ಸಿದ್ಧಾಂತವು ಶಾಸ್ತ್ರೀಯಪ್ರಮಾಣ ಶೂನ್ಯವೂ, ಧಾರ್ಮಿಕ ಮಂಡಲಿಯಲ್ಲಿ ಅನರ್ಥವನ್ನುಂಟು ಮಾಡುವದೂ ಆಗಿರುವುದರಿಂದ ಅಸಾದರಣೀಯವಾಗಿರುವದು.

---

## ತೃತೀಯಾಧ್ಯಾಯಃ

ಮನುಧರ್ಮಶಾಸ್ತ್ರವು ಧರ್ಮಶಾಸ್ತ್ರಗಳಿಗೆಲ್ಲ ಶಿರೋಭೂಷಣವೆಂದು ಪ್ರಥಮಾಧ್ಯಾಯದಲ್ಲಿಯೂ ಮನುಧರ್ಮಶಾಸ್ತ್ರದಲ್ಲಿ ಸರ್ವ ಯುಗಕ್ಕೂ ಉಪಯೋಗವಾದ ಧರ್ಮವು ಬರೆಯಲ್ಪಟ್ಟಿರುವದೆಂದು ದ್ವಿತೀಯಾಧ್ಯಾಯದಲ್ಲಿಯೂ ಸಪ್ರಮಾಣವಾಗಿ ನಿರೂಪಿಸಿದ್ದಾಯಿತು ವೇದಾರ್ಥವನ್ನವಲಂಬಿಸಿಯೇ ಮನುಸ್ಮೃತಿಯು ಬರೆಯಲ್ಪಟ್ಟಿರುವುದರಿಂದಲೂ, ಮನುಸ್ಮೃತಿಯಲ್ಲಿ ಎಲ್ಲ ಯುಗಗಳ ಧರ್ಮವನ್ನು ಹೇಳಿರುವುದರಿಂದಲೂ, ಈ ವಿಷಯವನ್ನು ವೇದ, ಬೃಹಸ್ಪತಿ, ವೇದವ್ಯಾಸರು ಸರ್ವರೂ ಸ್ಪಷ್ಟವಾಗಿ ಹೇಳಿರುವುದರಿಂದಲೂ, ಮನುವಿರುದ್ಧವಾದದ್ದನ್ನು ವೇದವಿರುದ್ಧವೆಂದೇ ತಿಳಿದು ತ್ಯಜಿಸಬೇಕಾಗಿರುವುದರಿಂದಲೂ ಮನುಸ್ಮೃತಿಗೆ ವಿರುದ್ಧವಾದ ಯಾವ ಧರ್ಮಶಾಸ್ತ್ರವೂ ಪ್ರಮಾಣವಾಗಲಾರದು. "ಕೃತೇತು ಮಾನವಾಧರ್ಮಾಃ" ಎಂಬ ಪರಾಶರರ ವಚನಕ್ಕೆ ವಿದ್ಯಾಸಾಗರರು ತ್ರೇತಾಯುಗಕ್ಕೆ ಗೌತಮಸ್ಮೃತಿಯೆಂತಲೂ, ದ್ವಾಪರಕ್ಕೆ ಶಂಖಲಿಖಿತರ ಸ್ಮೃತಿಯೆಂತಲೂ, ಕಲಿ

ಯುಗಕ್ಕೆ ಪರಾಶರಸ್ಮೃತಿಯೆಂತಲೂ ನಿಶ್ಚಯಮಾಡಿರುವರು. ಆದರೆ ಪಾಠಕರು ಇಷ್ಟು ವಿಚಾರಮಾಡಬೇಕು; ಏನೆಂದರೆ, ಯುಗಯುಗಕ್ಕೂ ಬೇರೆಬೇರೆ ಧರ್ಮ ಶಾಸ್ತ್ರಗಳಿರಬೇಕೆಂದು ಗೌತಮರು ತಿಳಿದುಕೊಂಡಿದ್ದರೆ, ಅಥವಾ ತ್ರೇತಾಯು ಗಕ್ಕಾಗಿಯೇ ತಾವು ಧರ್ಮಶಾಸ್ತ್ರವನ್ನು ಮಾಡುವದಾಗಿದ್ದರೆ ಎಲ್ಲಿಯಾದರೂ ತಮ್ಮ ಧರ್ಮಶಾಸ್ತ್ರದಲ್ಲಿ ಆ ವಿಷಯವನ್ನು ಒರೆಯುತ್ತಿದ್ದರು. ತ್ರೇತಾಯುಗದ ಹೆಸರೇನು! ಯಾವಯುಗದ ಹೆಸರನ್ನೂ ತಮ್ಮ ಧರ್ಮಶಾಸ್ತ್ರದಲ್ಲಿ ಎಲ್ಲಿಯೂ ಹೇಳಿಲ್ಲ ಹೀಗಿರುವಲ್ಲಿ ವಿದ್ಯಾಸಾಗರರ ಅರ್ಥವು ಎಂದಿಗೆ ಪ್ರಮಾಣಿತವಾದೀತು?

ಮಹಾತ್ಮರಾದ ಗೌತಮರು ಸ್ಮೃತಿಯ ಪ್ರಾರಂಭದಲ್ಲಿಯೇ—

ವೇದೋ ಧರ್ಮಮೂಲಂ ತದ್ವಿದಾಂಚ ಸ್ಮೃತಿಶೀಲೆ
ದೃಷ್ಟೋ ಧರ್ಮವ್ಯತಿಕ್ರಮ ಸ್ಸಾಹಸಂಚ ಮಹತಾಂನತು
ದೃಷ್ಟೋಽರ್ಥೇವರದೌರ್ಬಲ್ಯಾತ್ ತುಲ್ಯ ಬಲವಿರೋಧೇವಿಕಲ್ಪಃ,

ಅಂದರೆ ವೇದವೇ ಧರ್ಮಕ್ಕೆ ಮೂಲವಾದುದು. ಧರ್ಮದ ಸರಿಯಾದ ತತ್ವವನ್ನು ನಿಶ್ಚಯಿಸಬೇಕಾದರೆ ವೇದದ ಆಶ್ರಯವನ್ನೇ ಪಡೆಯಬೇಕು. ವೇದ ವೇತ್ತೃಗಳಾದ ಮಹರ್ಷಿಗಳ ಆಚರಣೆಗಳೂ ಮತ್ತು ಅವರಿಂದ ರಚಿತವಾದ ಸ್ಮೃತಿಗಳೂ ಧರ್ಮದ ವಿಷಯದಲ್ಲಿ ಪ್ರಮಾಣಗಳಾಗಿವೆ. ಒಂದೊಂದು ಸಮ ಯದಲ್ಲಿ ಕಾಮಕ್ರೋಧಗಳಿಗೆ ವಶರಾಗಿ ಧರ್ಮವನ್ನು ಮೀರಿ ನಡೆದಿರುವರೆಂದೂ ಸಾಹಸವನ್ನು ಮಾಡಿರುವರೆಂದೂ ಕಂಡುಬಂದಿದ್ದರೂ ಅವು ಗಣನೆಗೆ ತರತಕ್ಕವು ಗಳಲ್ಲವು ಕಾಮಕ್ರೋಧಗಳಿಗೆ ವಶರಾಗದೆ ಇದ್ದ ಕಾಲದಲ್ಲಿ ಅವರು ಆಚರಿಸಿರು ವುದನ್ನು ಪ್ರಮಾಣವಾಗಿ ತೆಗೆದುಕೊಳ್ಳಬೇಕು. ಕಾಮಕ್ರೋಧಗಳಿಗೆ ವಶರಾ ಗದೆ ಇರುವಾಗ ಅವರು ವಿಹಿತಕಾರ್ಯಗಳನ್ನು ಮೀರಿ ಅವಿಹಿತಕಾರ್ಯಗಳನ್ನು ಮಾಡಿರುವುದಿಲ್ಲ. ಅಂದರೆ ಅವರ ಆಚರಣೆಯನ್ನು ಸ್ಮೃತಿಯೊಂದಿಗೆ ಹೋಲಿಸಿ ನೋಡಿ ಸರಿಯಾಗಿರುವುದನ್ನು ಪ್ರಮಾಣವೆಂದು ಸ್ವೀಕರಿಸಬೇಕು. ಸ್ಮೃತಿವಚ ನಗಳು ಪರಸ್ಪರ ವಿರುದ್ಧಗಳಾಗಿದ್ದು ಎರಡು ಪಕ್ಷವೂ ಸಮಬಲವಾಗಿದ್ದರೆ ಎರ ಡನ್ನೂ ಸ್ವೀಕರಿಸಬೇಕು. ದುರ್ಬಲಪಕ್ಷವನ್ನು ಪ್ರಮಾಣವನ್ನಾಗಿ ಸ್ವೀಕರಿಸ ಬಾರದು'' ಎಂದು ಹೇಳಿರುವರು. ಧರ್ಮನಿರ್ಣಯವನ್ನು ವೇದದಿಂದಲೇ ಮಾಡಬೇಕು; ಮತ್ತು ವೇದವನ್ನು ತಿಳಿದಿರುವವರ ಸ್ಮೃತಿಗಳು ಸರ್ವ ಧರ್ಮ ಕಾರ್ಯಗಳಲ್ಲಿಯೂ ಪ್ರಮಾಣಗಳು, ಎಂದು ಹೇಳಿರುವುದರಿಂದ ಎಲ್ಲಾ ಸ್ಮೃತಿ ಗಳೂ ಯಾವುದನ್ನು ಅಜ್ಞಾಪಿಸುವವೋ ಆ ಧರ್ಮಕಾರ್ಯಗಳೇ ವಿಹಿತಗಳು.

ಅಲ್ಲದೆ ಧರ್ಮಕಾರ್ಯಗಳ ವಿಷಯದಲ್ಲಿ ಮುನಿಮತಗಳು ಭಿನ್ನಭಿನ್ನಗಳಾಗಿ ಆ ಭಾಗದಲ್ಲಿ ಹೆಚ್ಚು ಮುನಿಗಳ ಸಮ್ಮತಿ ಇರುವ ಪಕ್ಷವನ್ನೇ ಆಶ್ರಯಿಸಬೇಕಾ ವುದು ಸಿದ್ಧವಾಗುವದು.

ಹೀಗೆಯೇ ಶಂಖಸ್ಮೃತಿಯಲ್ಲಿಯೂ, ಲಿಖಿತಸ್ಮೃತಿಯಲ್ಲಿಯೂ ದ್ವಾ ಕ್ಕೆಂದು ಎಲ್ಲಿಯೂ ಹೇಳಿರುವುದಿಲ್ಲ. ಅದು ದ್ವಾಪರಕ್ಕೇನೇ ರಚಿತವಾಗಿದ್ದ ದಲ್ಲಿ ಎಲ್ಲಿಯಾದರೂ ಆ ವಿಷಯವನ್ನು ಹೇಳುತ್ತಿದ್ದರು. ಆದುದರಿಂದ ಸ ಧರ್ಮಶಾಸ್ತ್ರಗಳೂ ನಾಲ್ಕು ಯುಗಗಳಿಗೂ ಏರ್ಪಟ್ಟಿರುವವೆಂದು ಸ್ಪಷ್ಟವಾ ವದು. ಪರಾಶರರು ವಿನಾ ಇನ್ನು ಯಾರೂ ಧರ್ಮಶಾಸ್ತ್ರಗಳನ್ನು ಯುಗ ಷಕ್ಕೆಂದು ಹೇಳಿರುವುದಿಲ್ಲ. ಸ್ಮೃತಿಗಳೆಲ್ಲವನ್ನೂ ನೋಡಿದರೆ ಒಂದರಲ್ಲಿ ಒ ವಿಷಯವು ಸಂಕ್ಷೇಪವಾಗಿಯೂ ಒಂದರಲ್ಲಿ ವಿಸ್ತಾರವಾಗಿಯೂ ಇವೆ. ಕೆ ವರು ಸ್ಮೃತಿಕಾರರು ಪ್ರಾಯಶ್ಚಿತ್ತ ವರ್ಣನದಲ್ಲಿಯೇ ಸ್ಮೃತಿಯನ್ನು ಮುಗಿಸಿ ವರು. ಕೆಲವರು ಆಚಾರಧರ್ಮಗಳನ್ನು ಮಾತ್ರವೇ ಹೇಳಿರುವರಲ್ಲದೆ ಇ ಯಾವುದನ್ನೂ ಎತ್ತಿಯೇ ಇಲ್ಲ. ಇಷ್ಟೇ ಇವುಗಳಲ್ಲಿರುವ ಭೇದವು ವ್ಯವ ಗಳಲ್ಲಿ ಪರಸ್ಪರ ಭೇದಗಳೇನೂ ಇರುವುದಿಲ್ಲ.

ಯುಕ್ತಿಪೂರ್ವಕವಾಗಿ ವಿಚಾರಮಾಡಿದರೂ ಯುಗಕ್ಕೆ ತಕ್ಕಂತೆ ಒದಗ ಶಕ್ತಿಯನ್ನು ವಿಚಾರಮಾಡಿಕೊಂಡು ಸಾಧ್ಯ ಅಸಾಧ್ಯಗಳಭೇದವನ್ನಿಟ್ಟು ಧರ ಕರ್ಮಗಳನ್ನು ವಿಧಾನಮಾಡುವದು ಧರ್ಮೋಪದೇಶಕರ ಕೆಲಸವಲ್ಲವು. ನಿ ಕರ್ಮಗಳ ವಿಷಯದಲ್ಲಿ ಹೇಳತಕ್ಕದ್ದೇನು? ಕೃತಯುಗದಲ್ಲಿ ನಿಷಿದ್ಧವಾದು ಇತರ ಯುಗಗಳಲ್ಲಿ ವಿಹಿತಗಳಾಗಲಾರವು. ಅಧೋಗತಿಯನ್ನುಂಟುಮಾಡ ಕರ್ಮಗಳು ಕೃತಯುಗದಲ್ಲಿ ಮನುಷ್ಯರಿಗೆ ನಿಷಿದ್ಧವಾದಂತೆಯೇ ಅಧರ್ಮ ರ್ಣವಾದ ಕಲಿಯುಗದಲ್ಲಿಯೂ ನಿಷಿದ್ಧಗಳೆಂದೇ ತಿಳಿಯಬೇಕು. ಕಾಲವಶ ಜನಗಳ ಮನಸ್ಸು ಕೆಟ್ಟುಹೋಗುವದು. ಆಗ ನಿಷಿದ್ಧಕಾರ್ಯಗಳೂ ವಿ ಳೆಂದೇ ತೋರುವವು ಎಂದು ಹೇಳುವದಾದರೆ ಅದು ಯುಕ್ತಿಸಮ್ಮತವಾಗ ರದು. ಧರ್ಮಶೀಲರೂ ಧರ್ಮಪರಾಯಣರೂ ಆದ ಜನಗಳ ಸಮಾಜ ಯಾವುದಾದರೂ ನಿಂದ್ಯಕರ್ಮವು ಪ್ರಚಲಿತವಾಗಿ ಅದರಿಂದ ಜನಗಳು ಅಧ ಪರಾಯಣರಾಗಲಾರಂಭವಾದರೆ ಆ ಸಮಯದಲ್ಲಿ ಆ ನಿಂದ್ಯಕರ್ಮಗಳನ್ನು ಸುವುದಕ್ಕೆ ಅವಶ್ಯವಾಗಿಯೂ ಪ್ರಯತ್ನಿಸಬೇಕು. ಇಲ್ಲವಾದರೆ ಪ್ರಜ್ವಲಿ ಬೆಂಕಿಯಲ್ಲಿ ಒಣಗಿದ ಕಟ್ಟಿಗೆಯನ್ನು ಹಾಕಿದಂತೆ ಅಧರ್ಮಪ್ರವೃತ್ತಿಯು ಜನಸಮಾಜವನ್ನು ನಾಶಪಡಿಸುವದು.

ತಮ್ಮ ಪರಮೋನ್ನತಿಯನ್ನು ಬಯಸುವವರು ತಪಸ್ಸನ್ನು ಮಾಡಬೇಕಾಗು ವದು. ಆದರೆ ಸರ್ವಕಾಲದಲ್ಲಿಯೂ ಸರ್ವಜನಗಳಿಗೂ ತಪಸ್ಸು ಮಾಡುವುದಕ್ಕೆ ಯೋಗ್ಯವಾದ ಶಕ್ತಿಯು ಸಹಜವಾಗಿಯೇ ಇರುವುದಿಲ್ಲ. ಯುಗಾನುಸಾರವಾಗಿ ಶಕ್ತಿಯು ಕ್ಷೀಣವಾಗುವುದರಿಂದ ಶಾಸ್ತ್ರದಲ್ಲಿ ಹೇಳಿರುವಂತೆ ಸರಿಯಾಗಿ ಸಮಸ್ತ ಧರ್ಮಕಾರ್ಯಗಳನ್ನು ಮಾಡುವುದರಲ್ಲಿ ಸರ್ವ ಜನಗಳೂ ಒಂದು ವಿಧದಲ್ಲಿ ಪ್ರಾಯಃ ಅನಧಿಕಾರಿಗಳೇ ಆಗುವರು. ಅದು ನಿಜವೇ. ಆದರೂ ತ್ರೇತಾಯು ಗದಲ್ಲಿ ಕೃತಯುಗದಂತಹ ಮನುಷ್ಯನು ಒಬ್ಬನಾದರೂ ಹುಟ್ಟುವದಿಲ್ಲ. ಅಥವಾ ದ್ವಾಪರದಲ್ಲಿಯೂ ಕಲಿಯುಗದಲ್ಲಿಯೂ ಅಂತಹ ಒಬ್ಬ ಮನುಷ್ಯನೂ ಹುಟ್ಟುವು ದಿಲ್ಲವೆಂದು ಹೇಳಲಾಗುವದಿಲ್ಲ. ವ್ಯಾಸಪುತ್ರರಾದ ಶುಕಮುನಿಗಳು ಧರ್ಮಪುತ್ರ ಯುಧಿಷ್ಠಿರನು, ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾರ್ಯರು ಮೊದಲಾದ ಮಹಾತ್ಮರುಗಳು ಈ ಕಲಿಯುಗದಲ್ಲಿಯೇ ಜನ್ಮ ವನ್ನೆತ್ತಿರುವರು. ಹೀಗಿರುವಾಗ ಕಲಿಯುಗದಲ್ಲಿ ಧರ್ಮಾನುರಾಗಿಗಳೂ ತಪ ಸ್ವಿಗಳೂ ಜ್ಞಾನಿಗಳೂ ಯಾರೂ ಆಗಲಾರರೆಂದು ಹೇಗೆ ಹೇಳಬಹುದು ?

ಈ ಮಹಾತ್ಮರುಗಳು ಕಲಿಯುಗದಲ್ಲಿ ಉತ್ಪನ್ನರಾಗಿರುವರೆಂಬುದಕ್ಕೆ ವಿದ್ಯಾಸಾಗರರೇ ಪ್ರಮಾಣವನ್ನು ಕೊಟ್ಟಿರುವರು.

"ಶತೇಷು ಷಟ್ಸುಸಾರ್ಧೇಷು ತ್ರ್ಯಧಿಕೇಷುಚ ಭೂತಲೆ ||
ಕಲೇರ್ಗತೇಷು ವರ್ಷಾಣಾ ಮಭವನ್ ಕುರುಪಾಂಡವಾಃ ||

ಕಲಿಯುಗದ ಆರುನೂರೈವತ್ತಮೂರು ವರ್ಷಗಳು ಕಳೆದ ಮೇಲೆ ಕುರು ಪಾಂಡವರುಗಳು ಭೂಮಿಯಲ್ಲಿದ್ದರು ( ರಾಜತರಂಗಿಣೀ )

ಏಷು ವರ್ಷಸಹಸ್ರೇಷು ಕಲೇರ್ಯಾತೇಷು ಪಾರ್ಥಿವ ||
ತ್ರಿಶತೇ ಚ ದಶನ್ಯೂನೆ ಹ್ಯಸ್ಯಾಂಭುವಿ ಭವಿಷ್ಯತಿ ||
ಶೂದ್ರಕೋನಾಮ ವೀರಾಣಾಮಧಿಪಸ್ಸಿದ್ಧ ಸತ್ತಮಃ ||
ನೃಪಾನ್ ಸರ್ವಾನ್ ಪಾಪರೂಪಾನ್ ವರ್ಧಿತಾನ್ ಯೋಹನಿಷ್ಯತಿ ||
ಚರ್ವಿತಾಯಾಂ ಸಮಾರಾಧ್ಯಲಪ್ಸ್ಯತೆ ಭೂಭರಾಪಹಃ |
ತತಸ್ತ್ರಿಷು ಸಹಸ್ರೇಷು ದಶಾಧಿಕ ಶತತ್ರಯೆ |
ಭವಿಷ್ಯಂ ನಂದರಾಜಂ ಚ ಚಾಣಕ್ಯೋಯಾನ್ ಹನಿಷ್ಯತಿ ||
ಶುಕ್ಲತೀರ್ಥೆ ಸರ್ವಪಾಪ ನಿರ್ಮುಕ್ತಿಂ ಯೋಽಭಿಲಪ್ಸ್ಯತೆ ||
ತತಸ್ತ್ರಿಷು ಸಹಸ್ರೇಷು ಸಹಸ್ರಾಭ್ಯಧಿಕೇಷುಚ |

ಭವಿಷ್ಯೋ ವಿಕ್ರಮಾದಿತ್ಯೋ ರಾಜ್ಯಂ ಯೋತ್ರ ಪ್ರಲಪ್ಸ್ಯತೇ ||"

ಕಲಿಯುಗದ ೩೨೯೦ ವರ್ಷಗಳು ಕಳೆದಮೇಲೆ ಶೂದ್ರಕನೆಂಬ ರಾಜ
ಜನಿಸುವನು. ಅವನು ಮಹಾ ವೀರನಾಗಿಯೂ, ಪ್ರಧಾನಸಿದ್ಧಪುರುಷನಾಗಿ
ಆಗುವನು. ಪಾಪಿಷ್ಠರಾದ ಸಮಸ್ತ ಪ್ರಬಲರಾಜರುಗಳನ್ನು ಸಂಹರಿಸುವ
ಚರ್ಚಿತಾನದಿಯ ತೀರದಲ್ಲಿ ಆರಾಧನವನ್ನು ಮಾಡಿ ಸಿದ್ಧನಾಗುವನು.
ಇಪ್ಪತ್ತು ವರ್ಷಗಳು ಕಳೆದ ಮೇಲೆ ನಂದವಂಶದ ರಾಜರುಗಳು ಜನಿಸುವ
ಚಾಣಕ್ಯನು ಆ ನಂದವಂಶವನ್ನು ನಾಶಮಾಡುವನು. ಮತ್ತು ಶುಕ್ಲತೀರ್ಥ
ಆರಾಧಿಸಿ ಸರ್ವ ಪಾಪಗಳನ್ನು ಪರಿಹರಿಸಿಕೊಳ್ಳುವನು ಕಲಿಯುಗದ ಸಾ
ಸಹಸ್ರ ವರ್ಷಗಳು ಕಳೆದ ಮೇಲೆ ವಿಕ್ರಮಾದಿತ್ಯರಾಜನು ಜನಿಸುವನು.

" ಅಥ ವಾ ರಾಣಸೀಂಗತ್ವಾ ಕೃತಕಾಷಾಯ ಸಂಗ್ರಹಃ |
ಸರ್ವಂ ಸನ್ಯಸ್ಯ ಸುಕೃತೀ ಮಾತೃ ಗುಪ್ತೋಭವದ್ಯತಿಃ ||

ಅನಂತರದಲ್ಲಿ ಕಾಶ್ಮೀರದ ಪ್ರಭುವಾದ ಮಾತೃಗುಪ್ತನೆಂಬ ಪುಣ್ಯಶೀಲ
ರಾಜನು ಸಕಲ ಸಾಂಸಾರಿಕ ವಿಷಯುಗಳನ್ನು ತ್ಯಜಿಸಿ ಕಾಶಿಗೆ ಹೋಗಿ ಕಾಷಾ
ವನ್ನು ಧರಿಸಿ ಯತಿಯಾದನು.

" ಆಜನ್ಮ ಬ್ರಹ್ಮಚಾರೀ ದಿಗಮಲವಸನಃ ಸಂಯತಾತ್ಮಾ ತಪಸ್ವೀ|
ಶ್ರೀ ಹರ್ಷಾರಾಧನೈಕವ್ಯಸನ ಶುಭಮತಿಸ್ತ್ಯಕ್ತ ಸಂಸಾರ ಮೋಹ
ಆಸೀದ್ಯೋ ಲಬ್ಧಜನ್ಮಾ ಸವತರವಪುಷಾಂ ಸತ್ತಮು ಶ್ರೀ ಸುವಸ್ತು
ತೇನೇದಂ ಧರ್ಮವಿತ್ತೇಃ ಸುಘಟಿತವಿಕಟಂಕಾರಿತಂ ಹರ್ಷಹರ್ಮ್ಯ

ಆಜನ್ಮಬ್ರಹ್ಮಚಾರಿಯೂ, ದಿಗಂಬರನೂ, ಜಿತೇಂದ್ರಿಯನೂ, ತಪಸ್ವಿಯೂ
ಹರ್ಷದೇವನ ಆರಾಧನದಲ್ಲಿ ತತ್ಪರನೂ, ಸಂಸಾರದ ಮೋಹವಿಲ್ಲದವನೂ, ಜ
ಸಾಫಲ್ಯವನ್ನು ಪಡೆದವನೂ, ಸುಪುರುಷನೂ ಆದ ಸುವಸ್ತು ಎಂಬವನು ಹ
ದೇವನಿಗಾಗಿ ಸುಂದರವಿಶಾಲಭವನವನ್ನು ಮಾಡಿಸಿದನು.

ಈ ದೃಷ್ಟಾಂತಗಳಿಂದ ಈ ಕಲಿಯುಗದಲ್ಲಿಯೂ ಧರ್ಮಾನುರಾಗಿಗಳ
ಅಲೌಕಿಕಶಕ್ತಿಸಂಪನ್ನರೂ ಆದ ಮಹಾತ್ಮರು ಜನಿಸಿರುವರೆಂದೂ ಅವರು ಕ
ಸಾಧ್ಯವಾದ ಧರ್ಮಗಳನ್ನು ಉತ್ತಮರೀತಿಯಿಂದ ಸಾಧಿಸಿರುವರೆಂದೂ ಸ
ಪಡುವದು.

ಈಗಲೂ ಭಾರತವರ್ಷದಲ್ಲಿ ಹುಡುಕಿ ನೋಡಿದರೆ ತಪೋಮಗ್ನರಾದ ಅನೇ
ಮಹಾತ್ಮರು ಕಂಡುಬರುವರು. ಕಲಿಯುಗದಲ್ಲಿ ಶಕ್ತಿಯು ಕ್ಷೀಣವಾ

ದೆಂದು ಶಕ್ತಿಗೆ ಅನುಸಾರವಾಗಿ ಕಲಿಯುಗಕ್ಕಾಗಿ ಅತಿ ಸುಲಭ ಧರ್ಮವನ್ನು ಬರೆದುಬಿಟ್ಟಿದ್ದರೆ ಈ ಮಹಾತ್ಮರೆಲ್ಲರ ಧರ್ಮೋನ್ನತಿಗೆ ಮಾರ್ಗವಿಲ್ಲದೆ ಹೋಗು ತ್ತಿತ್ತು.

ಅಧರ್ಮಪ್ರಬಲರಾದ ಪುರುಷರ ಸೌಲಭ್ಯಕ್ಕಾಗಿ ಧರ್ಮೋನ್ನತಿಯನ್ನು ಬಯಸುವವರ ದಾರಿಯನ್ನು ಅಡ್ಡಗಟ್ಟುವದು ಯುಕ್ತಿಗೂ ಧರ್ಮಕ್ಕೂ ವಿರುದ್ಧ ವಾದುದು. ಈ ವಿಷಯವನ್ನು ಧರ್ಮಶಾಸ್ತ್ರಕಾರರು ಚನ್ನಾಗಿ ಬಲ್ಲವರಾಗಿದ್ದರು. ಆದುಪರಿಂದಲೇ ಅವರು ಯಾವ ಸಮಯವಿಶೇಷಕ್ಕೂ ಧರ್ಮಾಚರಣದಲ್ಲಿ ಎಲ್ಲೆ ಯನ್ನು ಕಲ್ಪಿಸಲಿಲ್ಲ. ಅವರು ಧರ್ಮೋನ್ನತಿಗೆ ವಿಶಾಲವಾದ ಮಾರ್ಗವನ್ನು ತೋರಿಸಿರುವರು. ಯಾರಿಗೆ ಎಷ್ಟು ಶಕ್ತಿಯುಂಟೋ ಅವರು ಅಷ್ಟು ಧರ್ಮೋ ನ್ನತಿಯ ಮಾರ್ಗದಲ್ಲಿ ಮುಂದೆ ಮುಂದೆ ಹೆಚ್ಚುವುದಕ್ಕೆ ಪ್ರಯತ್ನಿಸಲಿ, ಎಂಬು ವದೇ ಅವರ ಮುಖ್ಯ ತಾತ್ಪರ್ಯವಾಗಿದ್ದಿತು.

ಯುಗವಿಶೇಷವನ್ನನುಸರಿಸಿ ಧರ್ಮವರ್ಣನವನ್ನು ಯಾವ ಸ್ಮೃತಿಯಲ್ಲಿಯೂ ಮಾಡದಿರುವದಕ್ಕೂ ಇದೇ ಕಾರಣವು. ಪಂಡಿತ ಈಶ್ವರಚಂದ್ರ ವಿದ್ಯಾಸಾಗ ರರೂ ಇದನ್ನು ಬಲ್ಲರು "ಕಲಿಯುಗದ ಈಗಿನ ಜನಗಳಿಗಿಂತಲೂ ಪೂರ್ವದ ಜನಗಳು ಶಾಸ್ತ್ರವನ್ನು ಚನ್ನಾಗಿ ತಿಳಿದಿದ್ದರು. ಅಲ್ಲದೆ ಹೆಚ್ಚಾಗಿ ಸ್ವೀಕರಿಸುತ್ತಿ ದ್ದರು. ಅವರಿಗೆ ಸಂದೇಹವಾವುದೂ ಇರಲಿಲ್ಲ" ಎಂದು ಅವರೇ ಹೇಳಿರುವುದ ರಿಂದಲೇ ಆ ಅಂಶವು ಸಿದ್ಧವಾಗುವದು.

ಪೂರ್ವಪುರುಷರು ಕೇವಲ ಪರಾಶರ ಧರ್ಮಶಾಸ್ತ್ರವೇ ಕಲಿಯುಗಕ್ಕೆಂದು ತಿಳಿದುಕೊಂಡು ಅದನ್ನೇ ಆಶ್ರಯಿಸದೆ ಇತರ ಧರ್ಮಶಾಸ್ತ್ರಗಳನ್ನೂ ಆಶ್ರಯಿಸಿ ನಡೆಯುತ್ತಿದ್ದರೆಂದೂ ಸಹ ಅವರ ಆ ಕಥನದಿಂದಲೇ ಸಿದ್ಧವಾಗುವದು ವಿರೋ ಧವಿಲ್ಲದ ಸ್ಥಳದಲ್ಲಿ ಯಾವ ಧರ್ಮಶಾಸ್ತ್ರವನ್ನವಲಂಬಿಸಿದರೂ ಕೆಲಸವು ನಡೆದು ಹೋಗುತ್ತದೆ ವಿರೋಧಬರುವ ಸ್ಥಳಗಳಲ್ಲಿ ಮಾತ್ರ ಎಲ್ಲ ಶಾಸ್ತ್ರಗಳ ಬಲಾಬಲ ಗಳನ್ನು ವಿಚಾರಮಾಡಿ ಯಾವದು ನಿರ್ಣೀತವಾಗುವದೋ ಅದನ್ನು ಒಪ್ಪಬೇಕು. ಆಚಾರವಿಧಿಯಲ್ಲಿ ಇಂತಹ ಎಷ್ಟೋ ಕರ್ಮಗಳಿವೆ ಮನುಷ್ಯರಲ್ಲಿ ಧರ್ಮದ ಸ್ಥಿತಿಯು ಪ್ರಬಲದಶೆಯಲ್ಲಿ ಇದ್ದರೆ ಆ ಸಮಯದಲ್ಲಿ ಅಂತಹ ಕರ್ಮಗಳು ಆಚರಣೆ ಯಲ್ಲಿದ್ದರೂ ಯಾರನ್ನೂ ಕುಮಾರ್ಗಕ್ಕೆ ಎಳೆಯುವದಿಲ್ಲ ಮನುಷ್ಯರ ಮನೋ ಗತಿಯು ತಾನಾಗಿಯೇ ಅಧರ್ಮದ ಕಡೆಗೆ ಓಡುತ್ತಿದ್ದ ಕಾಲದಲ್ಲಿ ಆ ಆಚಾರಗಳು ಅನುಷ್ಠಾನಕ್ಕೆ ಬಂದರೆ ಜನಗಳು ಅಧರ್ಮದಲ್ಲಿ ಹೆಚ್ಚು ಹೆಚ್ಚಾಗಿ ಬೀಳುವರು.

ಪೂರ್ವದಲ್ಲಿ ವಿಚಾರಶೀಲರಾದ ಋಷಿಗಳು ಮನುಷ್ಯಸಮಾಜದ ಸ್ಥಿತಿಯನ್ನು ಪರ್ಯಾಲೋಚಿಸಿ ಸಮಯಸಮಯಗಳಲ್ಲಿ ಆ ಕರ್ಮಗಳನ್ನು ಬಿಟ್ಟುಬಿಡಬೇಕೆಂದು ವಿಧಿಸಿರುವರು ಬೃಹನ್ನಾರದೀಯ ಪುರಾಣದಲ್ಲಿ—

“ ಸಮುದ್ರಯಾತ್ರಾ ಸ್ವೀಕಾರಃ ಕಮಂಡಲು ವಿಧಾರಣಂ |
ದ್ವಿಜಾನಾಮಸವರ್ಣಾಸು ಕನ್ಯಾಸೂಪಯಮಸ್ತಥಾ ||
ದೇವರೇಣಸುತೋತ್ಪತ್ತಿ ರ್ಮಧುಪರ್ಕಪಶೋರ್ವಧಃ |
ಮಾಂಸಾದನಂ ತಥಾ ಶ್ರಾದ್ಧೆ ವಾನಪ್ರಸ್ಥಾಶ್ರಮಸ್ತಥಾ ||
ದತ್ತಾಯಾಶ್ಚೈವ ಕನ್ಯಾಯಾಃ ಪುನರ್ದಾನಂ ಪರಸ್ಯಚ |
ದೀರ್ಘಕಾಲಂ ಬ್ರಹ್ಮಚರ್ಯಂ ನರಮೇಧಾಶ್ವಮೇಧಕೌ ||
ಮಹಾಪ್ರಸ್ಥಾನಗಮನಂ ಗೋಮೇಧಂಚ ತಥಾಮಖಂ |
ಇಮಾ ಧರ್ಮಾ ಕಲಿಯುಗೆ ವರ್ಜ್ಯಾನಾಹುರ್ಮನೀಷಿಣಃ||

ಆದಿತ್ಯ ಪುರಾಣದಲ್ಲಿ—

ದೀರ್ಘಕಾಲಂ ಬ್ರಹ್ಮಚರ್ಯಂ ಧಾರಣಂಚ ಕಮಂಡಲೋಃ|
ದೇವರೇಣ ಸುತೋತ್ಪತ್ತಿ ರ್ದತ್ತಾ ಕನ್ಯಾಪ್ರದೀಯತೆ ||
ಕನ್ಯಾನಾಮ ಸವರ್ಣಾನಾಂ ವಿವಾಹಶ್ಚ ದ್ವಿಜಾತಿಭಿಃ |
ಆತತಾಯಿ ದ್ವಿಜಾಗ್ರ್ಯಾಣಾಂ ಧರ್ಮಯುದ್ಧೆ ವಿಹಿಂಸನಂ ||
ವಾನಪ್ರಸ್ಥಾಶ್ರಮಸ್ಯಾಪಿ ಪ್ರವೇಶೋ ವಿಧಿದೇಶಿತಃ |
ವೃತಸ್ವಾಧ್ಯಾಯಸಾಪೇಕ್ಷ ಮಘಸಂಕೋಚನಂ ತಥಾ||
ಪ್ರಾಯಶ್ಚಿತ್ತ ವಿಧಾನಂಚ ವಿಪ್ರಾಣಾಂ ಮರಣಾನ್ತಿಕಂ |
ಸಂಸರ್ಗದೋಷಃ ಪಾಪೇಷು ಮಧುಪರ್ಕೆ ಪಶೋರ್ವಧಃ ||
ದತ್ತೌರಸೇತರೇಷಾಂತು ಪುತ್ರತ್ವೇನ ಪರಿಗ್ರಹಃ |
ಶೂದ್ರೇಷುದಾಸ ಗೋಪಾಲಕುಲಮಿತ್ರಾರ್ಧಸೀರಿಣಾಂ ||
ಭೋಜ್ಯಾನ್ನತಾ ಗೃಹಸ್ಥಸ್ಯ ತೀರ್ಥಸೇವಾತಿದೂರತಃ |
ಬ್ರಾಹ್ಮಣಾದಿಷು ಶೂದ್ರಸ್ಯ ಪಕ್ವತಾದಿ ಕ್ರಿಯಾಪಿಚ ||
ಭೃಗ್ವಗ್ನಿಮರಣಂಚೈವ ವೃದ್ಧಾಪಿ ಮರಣಂ ತಥಾ | ”

ಇವುಗಳನ್ನು ಹೇಳಿ,

ಏತಾನಿ ಲೋಕೆ ಗುಪ್ತ್ಯರ್ಥಂ ಕಲೇರಾದೌ ಮಹಾತ್ಮಭಿಃ |
ನಿವರ್ತಿತಾನಿ ಕರ್ಮಾಣಿ ವ್ಯವಸ್ಥಾಪೂರ್ವಕಂ ಬುಧೈಃ || ”

ಸಮುದ್ರಯಾನ, ಕಮಂಡಲುವನ್ನು ಧರಿಸುವದು. ಬ್ರಾಹ್ಮಣಾದಿಗಳಲ್ಲಿ ಅಸವರ್ಣಕನ್ಯೆಯ ವಿವಾಹ ದೇವರನಿಂದ (ಪತಿಯ ಅಣ್ಣ ಅಥವಾ ತಮ್ಮ) ಸಂತಾನವನ್ನು ಪಡೆಯುವದು. ಮಧುಪರ್ಕದಲ್ಲಿ ಪಶುವಧ, ಮಾಂಸ ಶ್ರಾದ್ಧ, ವಾನಪ್ರಸ್ಥಾಶ್ರಮ, ದಾನಮಾಡಿದ ಕನ್ಯೆಯನ್ನು ಮತ್ತೊಬ್ಬ ವರನಿಗೆ ದಾನಮಾಡುವುದು, ಬಹಳ ಕಾಲದವರಿಗೆ ಬ್ರಹ್ಮಚಾರಿಯಾಗಿರುವದು, ನರಮೇಧ ಅಶ್ವಮೇಧ ಯಜ್ಞಗಳು, ಮಹಾಪ್ರಸ್ಥಾನ, ಗೋಮೇಧಯಜ್ಞ ಈ ಕರ್ಮಗಳನ್ನು ಕಲಿಯುಗದಲ್ಲಿ ಮಾಡಬಾರದೆಂದು ವಿದ್ವಾಂಸರು ಹೇಳುವರು.

ದೀರ್ಘಕಾಲದವರಿಗೆ ಬ್ರಹ್ಮಚರ್ಯವನ್ನು ವಹಿಸುವದು, ಕಮಂಡಲುಧಾರಣ ದೇವರನಿಂದ ಸಂತಾನೋತ್ಪತ್ತಿ, ದಾನಮಾಡಿದ ಕನ್ಯೆಯನ್ನು ಪುನಃ ದಾನಮಾಡುವದು, ಬ್ರಾಹ್ಮಣಾದಿಗಳು ಅಸವರ್ಣ ಕನ್ಯೆಯನ್ನು ವಿವಾಹ ಮಾಡಿಕೊಳ್ಳುವದು, ಆತತಾಯಿಗಳು ಅಂದರೆ ಮನೆಗೆ ಬೆಂಕಿಯನ್ನು ಹಾಕುವವರು, ವಿಷವನ್ನು ಹಾಕುವವರು, ಮೊದಲಾದ ಪಾಪ ಕೆಲಸವನ್ನು ಮಾಡುವ ಬ್ರಾಹ್ಮಣಾದಿಗಳನ್ನು ಧರ್ಮಯುದ್ಧದಲ್ಲಿ ಹಿಂಸಿಸುವದು, ವಾನಪ್ರಸ್ಥನಾಗುವದು, ವ್ರತ ಅಂದರೆ ಅಗ್ನಿಹೋಮ ಮೊದಲಾದವುಗಳಿಗಾಗಿಯೂ, ವೇದಾಧ್ಯಯನಕ್ಕಾಗಿಯೂ ಅಶೌಚವನ್ನು ಹೆಚ್ಚು ಕಡಿಮೆ ಮಾಡುವದು, ಬ್ರಾಹ್ಮಣನಿಗೆ ಮರಣಾಂತ ಪ್ರಾಯಶ್ಚಿತ್ತವೂ, ಪಾಪಗಳಲ್ಲಿ ಸಂಸರ್ಗದೋಷವು. ಮಧುಪರ್ಕದಲ್ಲಿ ಪಶುವಧವು, ದತ್ತನನ್ನೂ ಔರಸನನ್ನೂ ಬಿಟ್ಟು ಉಳಿದ ಪುತ್ರರುಗಳನ್ನು ಪುತ್ರನೆಂದು ಸ್ವೀಕರಿಸುವದು, ಶೂದ್ರಜಾತಿಯಲ್ಲಿ ದಾಸ ಗೋಪಾಲ ಕುಲಮಿತ್ರ ಅರ್ಧಸೀರಿ ಇವರೊಂದಿಗೆ ಊಟಮಾಡುವದು, ಗೃಹಸ್ಥನು ಅತಿ ದೂರ ದೇಶದಲ್ಲಿ ತೀರ್ಥಯಾತ್ರೆಯನ್ನು ಮಾಡುವದು, ಬ್ರಾಹ್ಮಣಾದಿ ವರ್ಣಗಳಿಗಾಗಿ ಶೂದ್ರನು ಅಡಿಗೆ ಮಾಡುವದು, ಬೆಟ್ಟದ ತುದಿಯಿಂದ ಧುಮುಕಿ ಅಥವಾ ಬೆಂಕಿಯಲ್ಲಿ ಬಿದ್ದು ಪ್ರಾಣವನ್ನು ಬಿಡುವದು, ವೃದ್ಧರೇ ಮೊದಲಾದವರು ತಮ್ಮ ಇಷ್ಟಬಂದಾಗ ಸಾಯುವದು ಈ ಕರ್ಮಗಳನ್ನೆಲ್ಲವನ್ನೂ ಕಲಿಯುಗದ ಆದಿಯಲ್ಲಿ ಮಹಾತ್ಮರಾದ ಋಷಿಗಳು ಮಾನವರ ಸಂರಕ್ಷಣಾರ್ಥವಾಗಿ ನಿಷೇಧಿಸಿರುವರು.

ಮಹಾತ್ಮರು ಏರ್ಪಡಿಸಿದ ಈ ನಿಯಮಗಳೊಳಗೆ ಯಾವುದೂ ಧರ್ಮಶಾಸ್ತ್ರಕ್ಕೆ ವಿರುದ್ಧವಾದುದಲ್ಲ ಧರ್ಮಶಾಸ್ತ್ರದ ನಿಜವಾದ ಸಾರವನ್ನು ಸಂಗ್ರಹಿಸಿಯೇ ಈ ನಿಯಮಗಳು ಮಾಡಲ್ಪಟ್ಟಿವೆ. ಕಲಿಯುಗದ ಆದಿಯಲ್ಲಿಯೇ ಶಕ್ತರಾದ ಮಹಾತ್ಮರು ಈ ನಿಯಮವನ್ನು ಯಾರಿ ನಡೆದುದನ್ನು ನೋಡಿ ವಿಧಾ

ಸಾಗರರು—" ಅವರು ಆದಿಪುರಾಣ ಮೊದಲಾದವುಗಳ ನಿಷೇಧವನ್ನು ಲಕ್ಷ್ಯ ದಲ್ಲಿಡದೆ ಅಶ್ವಮೇಧ ಅಗ್ನಿಪ್ರವೇಶ ಮೊದಲಾದವುಗಳನ್ನು ಮಾಡಿರುವರು. ಇದ ರಿಂದ ಆ ಕಾಲದ ಜನಗಳು ಪುರಾಣಗಳಲ್ಲಿ ನಿಷೇಧವಿದ್ದಾಗ್ಯೂ ಸ್ಮೃತಿಯಲ್ಲಿ ಹೇಳಿ ದಂತೆ ಮಾಡುವದನ್ನು ಬಿಡುತ್ತಿರಲಿಲ್ಲ. "ಸಮಯಶ್ಚಾಪಿ ಸಾಧೂನಾಂ ಪ್ರಮಾ ಣಂ ವೇದವದ್ಭವೇತ್" ಸಾಧುಗಳ ನಿಯಮವೂ ಕೂಡ ವೇದದಂತೆ ಪ್ರಮಾಣ ವೆಂಬ ಅನುಶಾಸನವಿದ್ದಾಗ್ಯೂ ಪೂರ್ವದ ಜನಗಳು ಪುರಾಣದ ನಿಷೇಧದಲ್ಲಿ ದೃಷ್ಟಿ ಯನ್ನಿಡದೆ ಅಶ್ವಮೇಧ ಯಜ್ಞ ಮೊದಲಾದವುಗಳನ್ನು ಮಾಡಿರುವದರಿಂದ ಅವರು ಈ ನಿಷೇಧಗಳನ್ನು ಸ್ವಲ್ಪವೂ ಗಣನೆಗೆ ತರುತ್ತಿರಲಿಲ್ಲವೆಂದು ನಿಶ್ಚಯವಾಗುತ್ತದೆ ಎಂದು ಹೇಳಿರುವರು. ಪಂಡಿತ ಈಶ್ವರಚಂದ್ರ ವಿದ್ಯಾಸಾಗರರು ನಿಜವಾದ ತತ್ವ ವನ್ನು ಸ್ವೀಕರಿಸದೆ ತಮ್ಮ ಕಾರ್ಯಸಾಧನೆಯ ಆವೇಶದಲ್ಲಿ ಬಿದ್ದು ಅಲ್ಲಲ್ಲಿ ಅ ಸಿದ್ಧಾಂತವನ್ನು ಮಾಡಿರುವರು. ಯಾವ ಧಾರ್ಮಿಕರು ನಿಯಮಾನುಸಾರವಾ ಕಾರ್ಯವನ್ನು ಮಾಡಲಿಲ್ಲವೋ ಅವರು ಧರ್ಮಶಾಸ್ತ್ರದ ವಾಸ್ತವಿಕ ತತ್ವವೇನೆಂ ದನ್ನೂ, ಯಾವ ಪ್ರಯೋಜನಕ್ಕಾಗಿ ಈ ನಿಯಮಗಳನ್ನೆಲ್ಲವನ್ನೂ ಮಾಡಿರು ರೆಂಬುದನ್ನೂ, ತಿಳಿದಿದ್ದರಾದುದರಿಂದ ಋಷಿವಾಕ್ಯವನ್ನು ಅನಾದರಿಸಿರುವರೆಂ ಹೇಳಲಾಗುವುದಿಲ್ಲ. ಶಾಸ್ತ್ರ ತಾತ್ಪರ್ಯವನ್ನು ಅರಿತು ನಿಯಮಾನುಸಾರವಾ ನಡೆಯಬೇಕಾದವರು ಹಾಗೆ ನಡೆಯದಿದ್ದರೆ ಋಷಿ ವಚನವನ್ನು ಲಕ್ಷ್ಯಮಾ ಲ್ಲಿಲ್ಲವೆಂದು ಹೇಳಬಹುದಾಗಿದ್ದಿತು ಆದರೆ ಯಾರಿಗೆ ಈ ನಿಯಮವಿಲ್ಲವೇ ಇಲ್ಲವೋ ಅವರು ಅದರಂತೆ ನಡೆಯದಿದ್ದ ಮಾತ್ರಕ್ಕೆ ಪುರಾಣವನ್ನು ಅನಾದರ ಮಾಡಿ ರೆಂಬ ದೋಷವನ್ನು ಅವರ ಮೇಲೆ ಹೊರಿಸಲಾಗುವುದಿಲ್ಲ ಪುರಾಣಗಳಲ್ಲಿ ಹೇ ಳುವ ನಿಯಮಗಳು ಪೂರ್ಣಜಿತೇಂದ್ರಿಯರಾಗಿಯೂ, ಧರ್ಮಪ್ರಾಣರಾಗಿಯ ಇರುವ ಮಹಾತ್ಮರುಗಳಿಗಾಗಿ ಏರ್ಪಟ್ಟವುಗಳಲ್ಲ. ಕಲಿಯುಗದಲ್ಲಿ ಹುಟ್ಟಿದ ರೆಲ್ಲರೂ ಈ ನಿಯಮಗಳಿಗೆ ಒಳಪಟ್ಟಿರಬೇಕೆಂಬುವದು ಶಾಸ್ತ್ರದ ತಾತ್ಪರ್ಯವಲ್ಲ ಮತ್ತೇನೆಂದರೆ, ಈ ನಿಯಮಗಳೆಲ್ಲವೂ ದುರ್ಬಲೇಂದ್ರಿಯರಾದ ಪುರುಷರಿಗಾಗಿಯೆ ಅಲ್ಲದೆ ವೇದವ್ಯಾಸರಂತಹ ಜಿತೇಂದ್ರಿಯರಾದ ತಪಸ್ವಿಗಳಿಗೂ ಧರ್ಮಾತ್ಮನಾ ಧರ್ಮರಾಜನೇ ಮೊದಲಾದವರಿಗೂ ಅಲ್ಲವು ವೇದವ್ಯಾಸರಿಂದ ಕಲಿಯುಗದ ಕ್ಷೇತ್ರಜಸಂತಾನವು ಉತ್ಪನ್ನವಾಗಿರುವದು ಸಿದ್ಧಪುರುಷನಾದ ಶೂದ್ರಕರಾಜ ಅಶ್ವಮೇಧಯಜ್ಞವನ್ನು ಮಾಡಿರುವನು ಇದರಿಂದ ಅವರು ಪುರಾಣಗಳನ್ನು ಒಪ್ಪಲಿಲ್ಲವೆಂದು ಹೇಳುವದು ಶುದ್ಧ ಅನ್ಯಾಯವಾಗಿರುವದು. ಅಲ್ಲದೆ ಶು

ಮಹಾತ್ಮರಲ್ಲಿ ದೋಷಾರೋಪಣವನ್ನು ಮಾಡಿದಂತಾಗುವದು. ಮನುಷ್ಯಸಮಾಜಕ್ಕೆ ಬಹಳ ಹಾನಿಯನ್ನುಂಟುಮಾಡಿದಹಾಗಾಗುವದು.

ನಿಯೋಗಧರ್ಮಾನುಸಾರವಾಗಿ ಕ್ಷೇತ್ರಜಸಂತಾನವನ್ನು ಉತ್ಪಾದನ ಮಾಡಬೇಕಾದರೆ ಎಷ್ಟರ ಜಿತೇಂದ್ರಿಯತ್ವವು ಅವಶ್ಯಕವೆಂಬುವದನ್ನು ಮನುಸ್ಮೃತಿಯಲ್ಲಿ ನೋಡಿರಿ.

"ವಿಧವಾಯಾಂನಿಯುಕ್ತಸ್ತು ಘೃತಾಕ್ತೋ ವಾಗ್ಯತೋನಿಶಿ |
ಏಕಮುತ್ಪಾದಯೇ ತ್ಪುತ್ರಂ ನದ್ವಿತೀಯಂ ಕಥಂಚನ ||
ವಿಧವಾಯಾಂ ನಿಯೋಗಾರ್ಥೆ ನಿರ್ವೃತ್ತೇತು ಯಥಾವಿಧಿ |
ಗುರುವಚ್ಚಸ್ನುಷಾವಚ್ಚ ವರ್ತೇಯಾತಾಂ ಪರಸ್ಪರಂ ||
ನಿಯುಕ್ತೌಯೌವಿಧಿಂ ಹಿತ್ವಾವರ್ತೇಯಾತಾಂತು ಕಾಮತಃ |
ತಾವುಭೌಪತಿತೌಸ್ಯಾತಾಂ ಸ್ನುಷಾಗ ಗುರುತಲ್ಪಗೌ ||"

ನಿಯೋಗಧರ್ಮವನ್ನನುಸರಿಸಿ ವಿಧವೆಯಲ್ಲಿ ಸಂತಾನವನ್ನು ಉತ್ಪಾದನ ಮಾಡುವುದಕ್ಕಾಗಿ ಗುರುಜನಗಳಿಂದ ನಿಯಮಿಸಲ್ಪಟ್ಟ ಪುರುಷನು ತನ್ನ ಶರೀರಕ್ಕೆ ತುಪ್ಪವನ್ನು ಹಚ್ಚಿಕೊಂಡು ಮೌನವನ್ನು ಧರಿಸಿ (ನಿಯುಕ್ತಳಾದ ವಿಧವೆಯೊಂದಿಗೆ ಮಾತನ್ನೂ ಆಡದೆ) ಋತುಕಾಲದ ರಾತ್ರಿಯಲ್ಲಿ ಒಬ್ಬ ಪುತ್ರನನ್ನು ಮಾತ್ರ ಉತ್ಪಾದನ ಮಾಡಬೇಕು. ಮತ್ತೊಬ್ಬ ಪುತ್ರನನ್ನು ಎಂದಿಗೂ ಉತ್ಪಾದನ ಮಾಡಕೂಡದು ವಿಧಿ ಪೂರ್ವಕವಾಗಿ ಪುತ್ರೋತ್ಪಾದನ ಕಾರ್ಯವು ಪೂರ್ಣವಾದಮೇಲೆ ನಿಯುಕ್ತನಾದ ಪುರುಷನೂ ನಿಯುಕ್ತಳಾದ ಸ್ತ್ರೀಯೂ ಪರಸ್ಪರ ಗುರುವಿನಂತೆಯೂ ಸೊಸೆಯಂತೆಯೂ ಭಾವಿಸಿ ವ್ಯವಹರಿಸುತ್ತಿರಬೇಕು. ನಿಯೋಗದ ವಿಧಿಯನ್ನು ಮೀರಿ ತಮ್ಮ ಇಷ್ಟದಂತೆ ಸಮಾಗಮ ಮಾಡಿದರೆ ಆ ಸ್ತ್ರೀ ಪುರುಷರಿಬ್ಬರೂ ಗುರುವನ್ನು ಕೂಡಿದ ಮತ್ತು ಸೊಸೆಯನ್ನು ಕೂಡಿದ ಪಾಪಕ್ಕೆ ಗುರಿಯಾಗುವರು. ಎಂದು ಹೇಳಿರುವದು.

ಪರಸ್ತ್ರೀಯಲ್ಲಿ ತನ್ನ ಇಚ್ಛೆ ಬಂದಂತೆ ಸಮಾಗಮವನ್ನು ಮಾಡಿ ಪುತ್ರೋತ್ಪಾದನ ಮಾಡಿದರೆ ಆ ಸಂತಾನವು ಕ್ಷೇತ್ರಜಸಂತಾನವಾಗುವುದಿಲ್ಲ. ನಿಯಮಪೂರ್ವಕವಾಗಿ ವೇದವ್ಯಾಸರಂತಹ ಜಿತೇಂದ್ರಿಯರಿಂದ ಉತ್ಪನ್ನವಾದ ಸಂತಾನವೇ ಧರ್ಮಾನುಸಾರವಾದ ಕ್ಷೇತ್ರಜಸಂತಾನವಾಗುವದೆಂಬುವದು ಇದರಿಂದ ನಿಶ್ಚಿತವಾಗುವದು. ಈಗಿನ ದುರ್ಬಲೇಂದ್ರಿಯರು ಈ ವಿಧವಾದ ನಿಯಮವನ್ನು ಪಾಲಿಸಬಲ್ಲರೇ ? ಯಾರೂ ಈ ಕಾರ್ಯವನ್ನು ವಿಧಿಪೂರ್ವಕವಾಗಿ ಮಾಡಲಾರರು. ವಿಚಾರ

ಮಾಡಿ ನೋಡಿದರೆ ಈಗಿನ ಸ್ತ್ರೀಯರೂ, ಪುರುಷರೂ ಎಲ್ಲರೂ ಇಂದ್ರಿಯ ಸುಖದಲ್ಲಿಯೇ ಆಸಕ್ತರಾಗಿರುವರು. ಹೀಗಿರುವಾಗ ನಿಯೋಗದ ವಿಧಿಯನ್ನು ಧರ್ಮವೆಂದು ಇವರಲ್ಲಿ ಪ್ರಚಾರಕ್ಕೆ ತರುವದಾದರೆ ಗುರುಗಮನ ಸ್ನುಷಾ (ಸೊಸೆ) ಗಮನಪಾಪಗಳಿಗೆ ಗುರಿಯಾದವರನ್ನು ಎಣಿಸುವದಕ್ಕೆ ಸಾಧ್ಯವೇ ? ಆದುದರಿಂದ ಸಮಾಜದಲ್ಲಿ ಚಪಲೇಂದ್ರಿಯರಾದ ಪುರುಷರ ಸಂಖ್ಯೆಯು ಹೆಚ್ಚಿದ ಕಾಲದಲ್ಲಿ ದ್ವಿಜಸಮಾಜವನ್ನು ಸಂರಕ್ಷಿಸುವುದಕ್ಕಾಗಿ ನಿಯೋಗಧರ್ಮದಿಂದ ಸಂತಾನೋತ್ಪಾದನದ ರೀತಿಯನ್ನು ಸುತರಾಂ ನಿಷೇಧಿಸಬೇಕಾಯಿತು. ಆದಕ್ಕಾಗಿಯೇ,

“ ಏತಾನಿಲೋಕಗುಪ್ತ್ಯರ್ಥಂ ಕಲೇರಾದೌ ಮಹಾತ್ಮಭಿಃ ”

ಎಂದು ಹೇಳಲ್ಪಟ್ಟಿತು. ಪುರಾಣದ ವಾಕ್ಯದಲ್ಲಿ ದ್ವಿಜಸಮಾಜದ ಪ್ರಮುಖ ಮಹರ್ಷಿಗಳು ಇಂದ್ರಿಯ ಪರವಶರಾಗಿ ಶಕ್ತಿಹೀನರಾದ ಪುರುಷರುಗಳಿಗಾಗಿಯೇ ಇಂತಿಂತಹ ಕಾರ್ಯಗಳನ್ನು ಮಾಡಕೂಡದೆಂದು ವ್ಯವಸ್ಥೆಮಾಡಿರುವರು. ಕಲಿಯುಗದಲ್ಲಿ ಇಂದ್ರಿಯವಶರಾದ ಪುರುಷರ ಸಂಖ್ಯೆಯು ಅಧಿಕವಾಗಿರುವುದರಿಂದ ಸಾಮಾನ್ಯವಾಗಿ ಕಲಿಯುಗಕ್ಕಾಗಿ ಎಂದು ಹೇಳಿದರೂ ಶಕ್ತಿಹೀನರಾದವರಿಗೆ ಎಂತಲೇ ತಿಳಿಯಬೇಕಲ್ಲದೆ ಜಿತೇಂದ್ರಿಯರಾದ ಧಾರ್ಮಿಕರಿಗೆ ಈ ನಿಷೇಧವಲ್ಲ.

ಪರಾಶರರು ವಿನಾ ಇನ್ನಾವ ಸ್ಮೃತಿಕಾರರೂ ಆವ ಧರ್ಮಶಾಸ್ತ್ರವನ್ನೂ ಒಂದು ಕ್ಲಪ್ತಸಮಯಕ್ಕೆಂದು ಹೇಳಲಿಲ್ಲ. ಎಲ್ಲರೂ ಲೋಕಹಿತಕ್ಕಾಗಿ ದುರ್ಬಲರಿಗೆ ಮತ್ತು ಸಮಯಕ್ಕೆ ಉಪಯೋಗವಾದ ಸರ್ವ ವಿಧವಾದ ಆಚಾರವ್ಯವಹಾರಗಳೇ ಮೊದಲಾದವುಗಳನ್ನು ವಿವರಿಸಿ ಇರುವರು. ಧರ್ಮಶಾಸ್ತ್ರಗಳೆಲ್ಲದರಲ್ಲಿಯೂ ಮನುಸ್ಮೃತಿಯನ್ನು ಆಜ್ಞಾಸಿದ್ಧವೆಂದು ಸನ್ಮಾನಿಸಿರುವರು.

ಇನ್ನು ಪರಾಶರಸಂಹಿತೆಯು ಕೇವಲ ಅಶಕ್ತರಾದ ಪುರುಷರಿಗಾಗಿಯೇ ಉಂಟಾದುದೇ ? ಅಥವಾ ಇದರಲ್ಲಿ ಇತರ ಧರ್ಮಶಾಸ್ತ್ರಗಳಂತೆ ಸರ್ವಕಾಲ ಸರ್ವಾವಸ್ಥೆಗಳ ಧರ್ಮಗಳೂ ಇವೆಯೇ ? ಎಂದು ವಿಚಾರಮಾಡುವದು ಉಚಿತವಾಗಿರುವದು.

ಈಗಿನ ಸಂದರ್ಭದಲ್ಲಿ ಎರಡು ಪರಾಶರ ಸ್ಮೃತಿಗಳು ನಮಗೆ ಕಂಡುಬರುತ್ತವೆ. ಒಂದು ಲಘುಪರಾಶರವೆಂತಲೂ ಮತ್ತೊಂದು ಬೃಹತ್ಪರಾಶರವೆಂತಲೂ ಪ್ರಸಿದ್ಧವಾಗಿವೆ. ಲಘುಪರಾಶರವು ಸ್ವಯಂಪರಾಶರರದೆಂತಲೂ ಬೃಹತ್ಪರಾಶರವು ಪರಾಶರರ ಸಮ್ಮತಿಯಿಂದ ಸುವ್ರತನೆಂಬ ತಪಸ್ವಿಯು ಮಾಡಿದುದೆಂತಲೂ ವಿದ್ಯಾಸಾಗರರವರು ಬರೆದಿರುವರು. ಅದರ ವಿಚಾರವನ್ನು ಸ್ವಲ್ಪವೂ ಬಿಡದೆ ಬರೆಯುತ್ತೇನೆ

ಈ ವಿಚಾರವು ಸರಿಯೇ ಅಲ್ಲವೇ ಎಂಬುದನ್ನು ವಾಚಕರು ವಿಚಾರಮಾಡಿ ನೋಡಲಿ ವಿದ್ಯಾಸಾಗರರು ಹೇಳುವದೇನೆಂದರೆ—

"ವ್ಯಾಸವಾಕ್ಯಾವಸಾನೇತು ಮುನಿಮುಖ್ಯಃ ಪರಾಶರಃ |
ಧರ್ಮಸ್ಯ ನಿರ್ಣಯಂಪ್ರಾಹ ಸೂಕ್ಷ್ಮಂಸ್ಥೂಲಂಚ ವಿಸ್ತರಾತ್ ||"

ವ್ಯಾಸರವಾಕ್ಯದ ಅನಂತರದಲ್ಲಿ ಮುನಿವರರಾದ ಪರಾಶರರು ಸೂಕ್ಷ್ಮಧರ್ಮವನ್ನೂ ಸ್ಥೂಲ ಧರ್ಮವನ್ನೂ ನಿರ್ಣಯಮಾಡಲಾರಂಭಿಸಿದರು ಎಂದು ಪ್ರಾರಂಭಿಸಿ ವ್ಯಾಸರನ್ನು ಸಂಬೋಧಿಸಿ,

ಶೃಣುಪುತ್ರಪ್ರವಕ್ಷ್ಯಾಮಿ ಶೃಣ್ವನ್ತುಮುನಯಸ್ತಥಾ |

ಪುತ್ರನೇ! ನಾನು ಧರ್ಮವನ್ನು ವರ್ಣನ ಮಾಡುವೆನು ನೀನೂ ಮತ್ತು ಋಷಿಗಳೂ ಕೇಳಿರಿ, ಎಂದು ಪರಾಶರ ಸಂಹಿತೆಯು ಸಾಕ್ಷಾತ್ ಪರಾಶರರಿಂದಲೇ ರಚಿಸಲ್ಪಟ್ಟದೆಂದು ಸ್ಪಷ್ಟವಾಗಿ ಕಂಡು ಬರುವದು. ಬೃಹತ್ಪರಾಶರದಲ್ಲಿ,

'ಪರಾಶರೋ ವ್ಯಾಸವಚೋsವಗಮ್ಯಯದಾಹ
ಶಾಸ್ತ್ರಂಚತುರಾಶ್ರಮಾರ್ಥಂ |
ಯಗಾನುರೂಪಂಚ ಸಮಸ್ತವರ್ಣಹಿತಾಯ
ವಕ್ಷ್ಯೇತ್ಯಥಸುವ್ರತಸ್ತತ್' ||

ಪರಾಶರರು ವ್ಯಾಸರ ವಚನವನ್ನು ಕೇಳಿ ನಾಲ್ಕು ಆಶ್ರಮಗಳು ಮತ್ತು ನಾಲ್ಕು ವರ್ಣಗಳು ಇವುಗಳ ಹಿತಕ್ಕಾಗಿ ಕಲಿಯುಗಕ್ಕೆ ಉಪಯುಕ್ತವಾದ ಶಾಸ್ತ್ರವನ್ನು ಹೇಳಿದರು ಅದನ್ನು ಸುವ್ರತನು ಹೇಳುವನು

"ಶಕ್ತಿಸೂನೋರನುಜ್ಞಾತ ಸ್ಸುತಪಾಸ್ಸುವ್ರತಸ್ತ್ವಿದಂ |
ಚತುರ್ಣಾಂವರ್ಣಾಶ್ರಮಾಣಾಂ ಚಹಿತಂಶಾಸ್ತ್ರಮಥಾಬ್ರವೀತ್ " ||

ಪರಾಶರರ ಆಜ್ಞಾನುಸಾರವಾಗಿ ತಪಸ್ವಿಯಾದ ಸುವ್ರತನು ನಾಲ್ಕು ಆಶ್ರಮಗಳಿಗೆ ಹಿತಕರವಾದ ಶಾಸ್ತ್ರವನ್ನು ಹೇಳಿದನು.

ಇದರಿಂದ ಬೃಹತ್ಪರಾಶರಸ್ಮೃತಿಯು ಪರಾಶರ ಕೃತವಲ್ಲವೆಂತಲೂ ಪರಾಶರರು ವ್ಯಾಸರಿಗೆ ಹೇಳಿದ ಧರ್ಮವನ್ನೇ ಪರಾಶರರ ಆಜ್ಞೆಯಿಂದ ಸುವ್ರತನು ಹೇಳಿರುವನೆಂತಲೂ, ಸಿದ್ಧವಾಗುವದು.

ಪಂ|| ಈಶ್ವರಚಂದ್ರ ವಿದ್ಯಾಸಾಗರರ ಈ ಮಾತನ್ನು ಪರ್ಯಾಲೋಚಿಸಿದರೆ ಲಘುಪರಾಶರ ಸ್ಮೃತಿಯನ್ನು ಸ್ವಯಂಪರಾಶರರೇ ರಚಿಸಿರುವರು. ವೇದವ್ಯಾಸರಿಗೆ ಪರಾಶರರು ಉಪದೇಶ ಮಾಡಿದುದನ್ನೇ ಪರಾಶರರ ಆಜ್ಞೆಯಿಂದ ಸಂಗ್ರಹಿಸಿ ಬೃಹ

ತ್ಪರಾಶರ ಸ್ಮೃತಿಯು ರಚಿಸಲ್ಪಟ್ಟಿರುವದೆಂದು ತೋರಿಬರುವದು. ಮತ್ತು ಪರಾಶರರು ಹೇಳದೇ ಇರುವದನ್ನೂ ಸಹ ಸುವ್ರತರು ಹೇಳಿರುವರೆಂದು ವಿದ್ಯಾಸಾಗರರು ಹೇಳಿರುವರು. ಸುವ್ರತರು ತಮ್ಮ ಇಚ್ಛಾನುಸಾರವಾಗಿ ಪರಾಶರರ ಉಪದೇಶಕ್ಕಿಂತಲೂ ಹೆಚ್ಚು ಹೇಳಿರುವರೆಂದು ಇವರ ಅಭಿಪ್ರಾಯವಾಗಿರುವದು. ಕೊನೆಗೆ ಬೃಹತ್ಪರಾಶರ ಸಂಹಿತೆಯನ್ನು ಈಗಿನ ವಿದ್ವಾಂಸರು ಯಾರೂ ಒಪ್ಪುವದಿಲ್ಲವಾದುದರಿಂದ ಈ ಗ್ರಂಥವು ಅಪ್ರಮಾಣವು. ಎಂದು ಹೇಳಿರುವರು.

ವಿದ್ಯಾಸಾಗರರು ಈ ಸಿದ್ಧಾಂತವನ್ನು ಎಲ್ಲಿ ಸಂಪಾದಿಸಿದರೋ ತಿಳಿಯಲ್ಲಿಲ್ಲ. ಬೃಹತ್ಪರಾಶರವನ್ನು ಪರಾಶರ ರಚಿತವೆಂದು ಇವರು ಸಮ್ಮತಿಸುವದಿಲ್ಲ, ಇದಕ್ಕೆ ಕಾರಣವುಂಟು.

“ನಷ್ಟೇಮೃತೇ ಪ್ರವ್ರಜಿತೇ” ಇತ್ಯಾದಿ ವಚನಗಳನ್ನು ಪರಾಶರರು ವಿಧವಾ ವಿವಾಹದ ವಿಧಿಯಲ್ಲಿ ತೋರಿಸಿರುವರೆಂಬುದನ್ನು ಬೃಹತ್ಪರಾಶರ ಸ್ಮೃತಿಯ ಪ್ರಮಾಣದಿಂದ ಸಿದ್ಧಮಾಡಲು ಸಾಧ್ಯವಾಗಲಿಲ್ಲ. ಇದೇ ಕಾರಣವು. ಪಂ॥ ಈಶ್ವರಚಂದ್ರ ವಿದ್ಯಾಸಾಗರರು ವಿನಾ ಇದುವರಿವಿಗೂ ಯಾರೂ ವೃದ್ಧಪರಾಶರವನ್ನು ಅಪ್ರಮಾಣವೆಂದು ಹೇಳಲಿಲ್ಲ. ಮತ್ತು ಎಲ್ಲರೂ ಪರಾಶರಕೃತವೆಂದೇ ಹೇಳುವರು. ಈ ಅಂಶವು ಇತರ ಗ್ರಂಥಗಳಿಂದಲೂ ಸ್ಪಷ್ಟವಾಗುವದು.

ಇದನ್ನು ಕೆಲವರು ವೃದ್ಧಪರಾಶರವೆಂತಲೂ ಕೆಲವರು ಬೃಹತ್ಪರಾಶರಸ್ಮೃತಿ ಎಂತಲೂ ಬರೆದಿರುವರು. ಮತ್ತೆ ಕೆಲವರು ಕೇವಲ ಪರಾಶರ ಎಂತಲೇ ಬರೆದಿರುವರು.

ಲಘುಪರಾಶರ ಸ್ಮೃತಿಯ ಭಾಷ್ಯದಲ್ಲಿ ಮಾಧವಾಚಾರ್ಯರು ವೃದ್ಧಪರಾಶರ ಎಂಬದಾಗಿ ಬರೆದಿರುವರು. ಏಷ್ಯಾಟಿಕ್ ಸೊಸೈಟಿಯವರು ಮುದ್ರಿಸಿರುವ ಪರಾಶರ ಮಾಧವವೆಂಬ ಮಾಧವಾಚಾರ್ಯ ಭಾಷ್ಯಸಹಿತವಾದ ಪರಾಶರ ಸ್ಮೃತಿಯ ११ ನೆ ಪುಟದ 11 ನೆ ಪಂಗ್ತಿಯಲ್ಲಿ,

“ಮುನಿಭಿಸ್ತತ್ತದ್ಯುಗ ಸಾಮರ್ಥ್ಯಂ
ವಿಧಿನಿಷೇಧಾಭ್ಯಾಂ ಸವಿಶೇಷೇಣ ಭಾವಿತಂ ತಥಾ
ವಿಹಿತಾತಿಕ್ರಮ ನಿಷಿದ್ಧಾಚರಣಯೋಃ
ಪ್ರಾಯಶ್ಚಿತ್ತಮಪಿಚಿರನ್ತನೇನ ಪರಾಶರೇಣೋಕ್ತಂ ।
ಜರಾಯುಜಾಂಡಜಾಶ್ಚೈವ ಜೀವಾಸ್ಸಂಸ್ವೇದಜಾಶ್ಚಯೇ ।
ಅವಧ್ಯಾಸ್ಸರ್ವಏವೈತೇ ಬುಧೈಸ್ಸಮನುವರ್ಣಿತಂ ॥

ಇತ್ಯಾದಿ—ಇದೇ ಗ್ರಂಥದ 216 ನೇ ಪೃಷ್ಠದಲ್ಲಿ-ವೃದ್ಧಪರಾಶರಃ

" ಉಪವಿಷ್ಟಸ್ತುವಿಣ್ಮೂತ್ರಂ ಕರ್ತುಂಯಸ್ತುನವಿಂದತಿ |
ಸಕುರ್ಯಾದರ್ಧಶೌಚಂತು ಸ್ವಸ್ಯಶೌಚಸ್ಯಸರ್ವದಾ " ||

ಈ ರೀತಿಯಲ್ಲಿ ಮಾಧವಾಚಾರ್ಯರು ವೃದ್ಧಪರಾಶರ ಸ್ಮೃತಿಯನ್ನು ಪ್ರಮಾಣವೆಂದು ಸ್ವೀಕರಿಸಿರುವರು. ಆದುದರಿಂದ ಬೃಹತ್ಪರಾಶರ ಸ್ಮೃತಿಯು ಪರಾಶರರಿಂದ ವಿರಚಿತವಾದುದೆಂಬುದಕ್ಕೆ ಪ್ರಮಾಣಾಂತರವನ್ನು ಕೊಡಬೇಕಾದ ಅವಶ್ಯಕತೆಯು ಇರುವದಿಲ್ಲ.

ವಿದ್ಯಾಸಾಗರರು ಲಘುಪರಾಶರ ಸ್ಮೃತಿಯನ್ನು ಪರಾಶರರು ಸ್ವಯಂರಚಿಸಿರುವರೆಂದು ಬರೆಯುವರು. ಅವರು ಬರೆದದ್ದನ್ನು ಇವರು ಕಣ್ಣಿನಿಂದ ನೋಡಲಿಲ್ಲ. ಹಾಗೆ ಹೇಳುವದಕ್ಕೆ ಇವರಲ್ಲಿ ಇದೊಂದೇ ಪ್ರಮಾಣವಿರುವದು.

" ಶೃಣುಪುತ್ರಪ್ರವಕ್ಷ್ಯೇಹಂ ಶೃಣ್ವಂತುಋಷಯಸ್ತಥಾ |
ಕಲ್ಪೇಕಲ್ಪೇಕ್ಷಯೋತ್ಪತ್ತೌ ಬ್ರಹ್ಮವಿಷ್ಣುಮಹೇಶ್ವರಾಃ ||

ಇಷ್ಟರಿಂದಲೇ ಲಘುಪರಾಶರವು ಪರಾಶರರಿಂದ ಸ್ವಯಂರಚಿತವಾದುದೆಂದು ತಿಳಿದುಕೊಂಡಿರುವರು. ಆದರೆ ಅದರ ಹಿಂದಿನ ವಚನದಲ್ಲಿ

" ವ್ಯಾಸವಾಕ್ಯಾವಸಾನೇತು ಮುನಿಮುಖ್ಯಃ ಪರಾಶರಃ |
ಧರ್ಮಸ್ಯನಿರ್ಣಯಂಪ್ರಾಹ ಸೂಕ್ಷ್ಮಂಸ್ಥೂಲಂಚವಿಸ್ತರಾತ್ || "

ವ್ಯಾಸವಾಕ್ಯವು ಸಮಾಪ್ತವಾದ ಮೇಲೆ ಮುನಿವರರಾದ ಪರಾಶರರು ವಿಸ್ತಾರವಾಗಿ ಧರ್ಮದ ಸೂಕ್ಷ್ಮಸ್ಥೂಲಭಾಗಗಳನ್ನು ನಿರ್ಣಯಮಾಡುವುದಕ್ಕೆ ಪ್ರಾರಂಭಿಸಿದರು ಎಂದು ವಿದ್ಯಾಸಾಗರರು ಈ ಶ್ಲೋಕಕ್ಕೆ ಅನುವಾದಮಾಡಿರುವರು. ಲಘುಪರಾಶರ ಸ್ಮೃತಿಯ ಈ ಶ್ಲೋಕವನ್ನು ಪರಾಶರರು ರಚಿಸಿರುವರೆಂದು ವಿದ್ಯಾಸಾಗರರು ಹೇಳಬಲ್ಲರೇ ? ಇದು ಸ್ಪಷ್ಟವಾಗಿಯೂ ಪರಾಶರರಿಗಿಂತಲೂ ಬೇರೆಯವನಿಂದಲೇ ರಚಿಸಲ್ಪಟ್ಟಿರುವದೆಂದು ಕಂಡುಬರುವದಿಲ್ಲವೇ ? ವಾಸ್ತವವಾಗಿಯೂ ಇದು ಪರಾಶರ ವಚನವಲ್ಲ. ವ್ಯಾಸರಿಗೂ ಅವರ ಅನುಯಾಯಿಗಳಿಗೂ ಪರಾಶರರು ಮಾಡಿದ ಧರ್ಮೋಪದೇಶದ ಸಾರಾಂಶವನ್ನು ಎತ್ತಿ ಆ ಶ್ರೋತೃ ಜನಗಳಲ್ಲಿ ಒಬ್ಬನೋ ಅಥವಾ ಅನ್ಯನೋ ಅತಿಸಂಕ್ಷೇಪವಾಗಿ ಈ ಸಂಹಿತೆಯನ್ನು ರಚಿಸಿರುವನು.

ಪರಾಶರರ ಉಪದೇಶವನ್ನು ಅವಲಂಬಿಸಿ ರಚಿಸಿದ ಸ್ಮೃತಿಯಾದುದರಿಂದ ಇದಕ್ಕೆ ಪರಾಶರಸ್ಮೃತಿ ಎಂದು ಹೆಸರು ಬಂದಿರುವದು. ಹಾಗೆಯೇ ಲಘುಪರಾಶರಸ್ಮೃತಿ ಮತ್ತು ಬೃಹತ್ಪರಾಶರಸ್ಮೃತಿ ಇವೆರಡರಲ್ಲಿ ಆವುದನ್ನೂ ಪರಾಶರರು

ಸ್ವಯಂ ರಚಿಸಿದವರಲ್ಲ. ಇವೆರಡನ್ನೂ ಇತರರೇ ಪುಸ್ತಕರೂಪದಲ್ಲಿ ಬರೆದಿರುವರು. ಪರಾಶರರ ಉಪದೇಶವನ್ನವಲಂಬಿಸಿಯೇ ಬರೆದಿರುವರು.

" ಯುಗೇಯುಗೇಚ ಸಾಮರ್ಥ್ಯಂಶೇಷಂ ಮುನಿಭಿಭಾಷಿತಂ |
ಪರಾಶರೇಣಚಾಪ್ಯುಕ್ತಂ ಪ್ರಾಯಶ್ಚಿತ್ತಂ ವಿಧೀಯತೆ ||
ಅಹಮದ್ಯೈವತದ್ಧರ್ಮ ಮನುಸ್ಮೃತ್ಯಬ್ರವೀಮಿವಃ |
ಚಾತುರ್ವರ್ಣ್ಯಸಮಾಚಾರಂ ಶೃಣುಧ್ವಂಮುನಿಪುಂಗವಾಃ ||
ಪರಾಶರಮತಂ ಪುಣ್ಯಂ ಪವಿತ್ರಂ ಪಾಪನಾಶನಂ |

ಮತ್ತು ಎರಡನೆ ಅಧ್ಯಾಯದಲ್ಲಿ—

ಅಂತಃಪರಂಗೃಹಸ್ಥಸ್ಯ ಧರ್ಮಾಚಾರಂಕಲೌಯುಗೆ |
ಧರ್ಮಸಾಧಾರಣಂಶಕ್ಯಂ ಚಾತುರ್ವರ್ಣಾಶ್ರಮಾಗತಂ ||
ಸಂಪ್ರವಕ್ಷ್ಯಾಮ್ಯಹಂಪೂರ್ವಂ ಪರಾಶರವಚೋಯಥಾ |

ಯುಗಯುಗದಲ್ಲಿಯೂ ಜನಗಳ ಶಕ್ತಿಯು ಕ್ಷೀಣವಾಗುತ್ತಿದೆ. ಎಂ ಮುನಿಗಳು ಹೇಳಿರುವರು. ಪರಾಶರರು ಹೇಳಿರುವ ಪ್ರಾಯಶ್ಚಿತ್ತವನ್ನು ಕೇಳಿ ಓ ಮುನಿಗಳೇ! ನಾನು ಆ ಪರಾಶರರು ಹೇಳಿದ ನಾಲ್ಕು ವರ್ಣಗಳ ಧರ್ಮ ಳನ್ನು ನೆನಪಿಗೆ ತಂದುಕೊಂಡು ಹೇಳುವೆನು ಕೇಳಿರಿ. ಪರಾಶರರ ಮತವು ಪ ತ್ರವೂ ಪುಣ್ಯಕರವೂ ಪಾಪನಾಶಕವೂ ಆಗಿರುವದು. ಬ್ರಾಹ್ಮಣರಿಗಾಗಿಯೂ ಧರ್ ದ ಸ್ಥಿತಿಗಾಗಿಯೂ ನಾನು ಅದನ್ನು ಸ್ಮರಣದಲ್ಲಿಟ್ಟಿರುವೆನು. ಎರಡನೆಯ ಅಧ್ಯಾ ಯದಲ್ಲಿ—ಕಲಿಯುಗದ ನಾಲ್ಕು ಆಶ್ರಮಗಳಿಗಾಗಿಯೂ ನಾಲ್ಕು ವರ್ಣಗಳಿಗಾ ಗಿಯೂ ನಿರ್ದೇಶಿಸಲ್ಪಟ್ಟ ಎಲ್ಲರಿಗೂ ಸುಲಭಸಾಧ್ಯವಾದ ಗೃಹಸ್ಥಾಶ್ರಮ ಧರ್ಮಾಚಾರಗಳನ್ನು ಪರಾಶರರ ಮತಾನುಸಾರವಾಗಿ ಹೇಳುವೆನು—

ಅಥಾತೊದ್ರವ್ಯಶುದ್ಧಿಃ ಪರಾಶರವಚೋಯಥಾ |

ಪರಾಶರರ ವಚನಾನುಸಾರವಾಗಿ ದ್ರವ್ಯಶುದ್ಧಿಯನ್ನು ಹೇಳುತ್ತೇನೆ.

" ದಶಗೋಮಿಥುನಂದದ್ಯಾಚ್ಛುದ್ಧಿಃ ಪರಾಶರೊಬ್ರವೀತ್ "

ಹತ್ತು ಗೋವುಗಳನ್ನೂ ಹತ್ತು ಎತ್ತುಗಳನ್ನೂ ಕೊಡುವದರಿಂದ ಶುದ್ಧನಾ ಗುವನು. ಇದು ಪರಾಶರರ ಮತವು.

ಪರಾಶರ ಸ್ಮೃತಿಯ ಈ ವಚನಗಳನ್ನು ನೋಡಿದರೆ ಅವನೋ ಒಬ್ಬ ಮು ಯು ಪರಾಶರರ ಮುಖದಿಂದಲೋ ಅಥವಾ ಪರಂಪರೆಯಿಂದಲೋ ಅವರ ಧರ್ಮೋ ಪದೇಶವನ್ನು ಅರಿತು ಬ್ರಾಹ್ಮಣರೇ ಮೊದಲಾದವರಿಗಾಗಿಯೂ ಧರ್ಮಸಂಸ್ಥಾ

ನಾರ್ಥವಾಗಿಯೂ ಪರಾಶರರ ಮತವನ್ನು ಸ್ಮೃತಿಯ ಆಕಾರದಲ್ಲಿ ರಚಿಸಿರುವನು. ಇದಕ್ಕೆ ಲಘುಪರಾಶರ ಸ್ಮೃತಿ ಎಂಬ ಹೆಸರಾಯಿತು. ಇದನ್ನು ಪರಾಶರರು ತಮ್ಮ ಹಸ್ತದಿಂದಲೇ ಬರೆದರೆಂಬುವದು ಆವರೀತಿಯಿಂದಲೂ ಸಿದ್ಧವಾಗುವದಿಲ್ಲ, ಎಂಬುವದು ಸ್ಪಷ್ಟಪಡುವದು.

ಪರಾಶರರ ಮತವು ಪವಿತ್ರವಾದುದು ಎಂಬಿವೇ ಮೊದಲಾದ ವಾಕ್ಯಗಳು ಇತರರದೇ ಆಗಿರಬೇಕು ಆದುದರಿಂದ ತಪಸ್ವೀ ಸುವ್ರತನು ಪರಾಶರರು ಹೇಳಿದ ಧರ್ಮಗಳನ್ನು ಬೃಹತ್ಪರಾಶರದಲ್ಲಿ ಬರೆದಂತೆಯೇ ಲಘುಪರಾಶರ ಸ್ಮೃತಿಯಲ್ಲಿಯೂ ಮತ್ತೊಬ್ಬ ಋಷಿಯು ಪರಾಶರರು ಹೇಳಿದ ಧರ್ಮವನ್ನು ಅತಿ ಸಂಕ್ಷೇಪದಿಂದ ಬರೆದಿರುವನು. ಇವೆರಡರೊಳಗೆ ಒಂದೂ ಪರಾಶರರ ಸಾಕ್ಷಾಲ್ಲೇಖನವಲ್ಲ. ಇವೆರಡಕ್ಕೂ ಭೇದವೇನೆಂದರೆ—ವೇದವ್ಯಾಸರಿಗೆ ಉಪದೇಶಿಸಿದ ಪರಾಶರರು ಲೋಕಹಿತಕ್ಕಾಗಿ ಸುವ್ರತನಿಗೆ ಆಜ್ಞಾಪಿಸಲು ಸುವ್ರತನು ಅವರ ಆಜ್ಞಾನುಸಾರವಾಗಿ ಅವರ ಉಪದೇಶವನ್ನು ಬೃಹತ್‌ಸ್ಮೃತಿರೂಪದಲ್ಲಿ ಬರೆದನು. ಲಘುಪರಾಶರಸ್ಮೃತಿಯು ಯಾರ ಅನುಮತಿಯಿಂದ ಯಾವಾಗ ಬರೆಯಲ್ಪಟ್ಟಿತೆಂಬುವದು ಮಾತ್ರ ತಿಳಿದುಬರುವುದಿಲ್ಲ. ಆದುದರಿಂದ ಲಘು ಪರಾಶರ ಸ್ಮೃತಿಯ ವ್ಯವಸ್ಥೆಗಳೆಲ್ಲವೂ ಪರಾಶರರದೇ ಸರಿ ಎಂಬಂಶದಲ್ಲಿಯೂ ಯಾವ ಪ್ರಮಾಣವೂ ಇರುವುದಿಲ್ಲ.

ಬ್ರಹತ್ಪರಾಶರ ಸ್ಮೃತಿಯನ್ನು ಪರಾಶರರ ಉಪದೇಶದಿಂದಲೇ ಸುವ್ರತನು ರಚಿಸಿರುವನಾದುದರಿಂದ ಒಂದುವೇಳೆ ಅದನ್ನು ಸಾಕ್ಷಾತ್ಪರಾಶರರದೆಂದು ಹೇಳಿದರೂ ಹಾನಿಯು ಇರುವುದಿಲ್ಲ. ಬೃಹತ್ಪರಾಶರರಲ್ಲಿ—

"ದೃಷ್ಟ್ವಂಚತತ್ಪರಂಧರ್ಮಂ ಸರ್ವಮೇ ತತ್ಪರಾಶರಃ |
ಪ್ರೋಕ್ತವಾನ್ ವ್ಯಾಸಮುಖ್ಯಾನಾಂಶೇಷಂ ಮುನಿವಿಭಾಷಿತಂ ||
ನಿಯುಕ್ತಸ್ಸುವ್ರತಶ್ಚೈಷಂ ವಿಪ್ರಾಣಾಂಖ್ಯಾಪನಾಯಚ |
ಪರಾಶರೋವ್ಯಾಸವಚೋನಿಶಮ್ಯಯದಾಹಶಾಸ್ತ್ರಂಚಕುರಾಶ್ರವಾರ್ಥಂ|
ಯುಗಾನುರೂಪಂಚಸಮಸ್ತವರ್ಣಹಿತಾಯವಕ್ಷ್ಯೈತ್ಯಥಸುವ್ರತಸ್ತತ್ ||
ಶಕ್ತಿಸೂನೋರನುಜ್ಞಾತಸ್ಸುತಪಾ ಸ್ಸುವ್ರತಸ್ತ್ವಿದಂ |
ಚತುರ್ವರ್ಣಾಶ್ರಮಾಣಾಂಚಹಿತಂ ಶಾಸ್ತ್ರಮಥಾಬ್ರವೀತ್ ||"

ವ್ಯಾಸರೇ ಮೊದಲಾದ ಋಷಿಗಳು ಪ್ರಶ್ನೆಯನ್ನು ಮಾಡಿದಮೇಲೆ ಧರ್ಮದ ವಿಷಯದಲ್ಲಿ ಧ್ಯಾನಮಾಡಿ ಜ್ಞಾನದೃಷ್ಟಿಯಿಂದ ತಿಳಿದು ಪರಾಶರರು ವ್ಯಾಸಾದಿ ಮುನಿಗಳಿಗೆ ಹೇಳಲಾರಂಭಿಸಿದರು. ವ್ಯಾಸರ ವಚನವನ್ನು ಕೇಳಿ ಪರಾಶರರು

ಲೋಕಹಿತಕ್ಕಾಗಿ ಹೇಳಿದ ಯುಗಧರ್ಮ, ಧರ್ಮದಸ್ವರೂಪ, ಸರ್ವವರ್ಣಗಳ ಧರ್ಮ, ನಾಲ್ಕು ಆಶ್ರಮಗಳ ಧರ್ಮ ಇವುಗಳನ್ನು ಒಳಗೊಂಡ ಧರ್ಮಶಾಸ್ತ್ರವನ್ನು ಸುವ್ರತನು ಹೇಳಿರುವನು. ಮಹಾತಪಸ್ವಿಯಾದ ಸುವ್ರತನು ಶಕ್ತಿಪುತ್ರರಾದ ಪರಾಶರರ ಆಜ್ಞೆಯಿಂದ ಬ್ರಾಹ್ಮಣಾದಿ ನಾಲ್ಕು ವರ್ಣಗಳ ಹಿತಕ್ಕಾಗಿ ಧರ್ಮಶಾಸ್ತ್ರವನ್ನು ರಚಿಸಿದನು.

ಪರಾಶರರು ವ್ಯಾಸರಿಗೆ ಉಪದೇಶಿಸಿ ಇತರ ಧಾರ್ಮಿಕರುಗಳಿಗಾಗಿ ಅದನ್ನು ಪ್ರಚಾರಮಾಡಬೇಕೆಂದು ಸುವ್ರತನಿಗೆ ಆಜ್ಞೆಯನ್ನಿತ್ತರು ಆ ಸಮಯದಲ್ಲಿ ಈ ಕೆಲಸಕ್ಕೆ ಸುವ್ರತನೇ ಯೋಗ್ಯನಾಗಿದ್ದನು ಎಂಬುದು ಇದರಿಂದ ವ್ಯಕ್ತವಾಗುವುದು. ಆದರೆ ವಿದ್ಯಾಸಾಗರರು ಅಂತಹ ಸುವ್ರತನನ್ನು ಸಾಧಾರಣ ಪುರುಷನೆಂದು ಹೇಳಿಬಿಟ್ಟರು. ಅವರು ಯುಗಧರ್ಮದ ಚಿಂತೆಯಲ್ಲಿ ಬಿದ್ದು ಯುಗಧರ್ಮದಲ್ಲಿ ಮುಳುಗಿಹೋಗಿದ್ದುದರಿಂದ ಒಬ್ಬ ತಪಸ್ವಿಯಾದ ಋಷಿಯನ್ನು ಸಾಮಾನ್ಯ ಮನುಷ್ಯನೆಂದು ಹೇಳಿದರು. ಆದರೂ ತಪಸ್ವಿಯಾದ ಸುವ್ರತಋಷಿಯ ಮಾತನ್ನು ಯಾವ ಭಾಗದಲ್ಲಿಯೂ ಅಸತ್ಯವೆಂದು ನಾವು ಹೇಳಲಾರೆವು. ತಪಸ್ವಿಗಳಿಗೆ ಸತ್ಯವೇ ಧರ್ಮವಾಗಿರುವದು. ಆದುದರಿಂದ ಒಬ್ಬ ತಪಸ್ವಿಯ ಧರ್ಮೋಪದೇಶವನ್ನು ಮಿಥ್ಯೆಯೆಂದು ಹೇಳಿ ಬೃಹತ್ಪರಾಶರವನ್ನು ಅಪ್ರಾಮಾಣಿಕವೆಂದು ಹೇಳುವದು ಅನುಚಿತಸಾಹಸವೇ ಸರಿ. ಅಲ್ಲದೆ ಗ್ರಂಥಕರ್ತನ ನಿಶ್ಚಯವೇ ಇಲ್ಲದ ಲಘುಪರಾಶರಸ್ಮೃತಿಗಿಂತಲೂ ಸುವ್ರತ ರಚಿತವಾದ ಬೃಹತ್ಪರಾಶರಸ್ಮೃತಿಯು ಸಾವಿರಪಾಲು ಮಾನ್ಯವಾಗಿಯೂ ಪ್ರಮಾಣವಾಗಿಯೂ ಆಗುವುದರಲ್ಲಿ ಅಭ್ಯಂತರವೇ ಇರುವದಿಲ್ಲ.

ಲಘುಪರಾಶರಸ್ಮೃತಿಯು ವ್ಯವಸ್ಥೆಗೂ ಬೃಹತ್ಪರಾಶರ ಸ್ಮೃತಿಯು ವ್ಯವಸ್ಥೆಗೂ ಭೇದವಿರುವದರಿಂದಲೂ ಸುವ್ರತನು ಕೇವಲ ಪರಾಶರರ ಧರ್ಮೋಪದೇಶವನ್ನೇ ಬರೆದಿದ್ದರೆ ಈ ಭೇದಕ್ಕೆ ಅವಕಾಶವಿರುತ್ತಿರಲಿಲ್ಲವೆಂತಲೂ ವಿದ್ಯಾಸಾಗರರು ಬರೆದಿರುವರು. ಈ ಸಂದೇಹವು ನ್ಯಾಯವಾದುದೇ ಸರಿ. ಆದರೆ, ವಿದ್ಯಾಸಾಗರರ ಸಿದ್ಧಾಂತದ ಮೂಲದಲ್ಲಿಯೇ ಭ್ರಮವಿರುವದರಿಂದ ಅವರಿಗೆ ಸಂದೇಹವುಂಟಾಯಿತು. ಅವರು ಲಘುಪರಾಶರ ಸ್ಮೃತಿಯನ್ನು ಯಾವ ವಿಚಾರವೂ ಇಲ್ಲದೆ ಯಾವ ಪ್ರಮಾಣವೂ ಇಲ್ಲದೆ ಪರಾಶರರ ಕೈಯಿಂದಲೇ ಬರೆಯಲ್ಪಟ್ಟಿರುವದೆಂದು ತಿಳಿದುಕೊಂಡಿರುವರು. ಆದುದರಿಂದ ಲಘುಪರಾಶರಕ್ಕೆ ವಿಪರೀತವಾಗಿ ಕಾಣುವ, ಲಘುಪರಾಶರಕ್ಕೆ ಹೊಂದದೇ ಇರುವ ವಚನಗಳು ಬೃಹತ್ಪರಾಶರದಲ್ಲಿ ಇರುವದೆಂದು ಇವರು ಅದನ್ನು ಪರಾಶರರು ಮಾಡಲಿಲ್ಲವೆಂದು ತಿಳಿದುಕೊಂಡಿರುವರು. ಆದರೆ

ಹಾಗೆ ತಿಳಿಯುವದು ಸರಿಯಾಗಿ ಕಾಣುವದಿಲ್ಲ. ಏಕೆಂದರೆ, ಲಘುಪರಾಶರವನ್ನು ಬರೆದವರು ಯಾರೆಂಬುದು ನಿಶ್ಚಯವಿಲ್ಲದುದರಿಂದಲೂ ಬೃಹತ್ಪರಾಶರವನ್ನು ಪರಾಶರರ ಆಜ್ಞೆಯಿಂದ ಸುವ್ರತನು ರಚಿಸಿ ಇರುವದರಿಂದಲೂ, ಬೃಹತ್ಪರಾಶರಕ್ಕೆ ವಿಪರೀತವಾಗಿರುವ ಲಘುಪರಾಶರದಲ್ಲಿರುವ ಅಂಶಗಳು ಪ್ರಮಾದವಶದಿಂದ ಲಘುಪರಾಶರದಲ್ಲಿ ಬರೆಯಲ್ಪಟ್ಟಿರುವದೆಂದು ಸ್ವೀಕಾರ ಮಾಡಬೇಕಾಗುವದು. ಹಾಗೆಯೇ ಬೃಹತ್ಪರಾಶರದಲ್ಲಿದ್ದು ಲಘುಪರಾಶರದಲ್ಲಿ ಇಲ್ಲದೇ ಇರುವ ಅಂಶಗಳು ಸಂಕ್ಷೇಪ ಮಾಡಬೇಕೆಂಬ ಇಚ್ಛೆಯಿಂದ ಲಘುಪರಾಶರದಲ್ಲಿ ಬಿಡಲ್ಪಟ್ಟಿದೆ, ಎಂದು ಹೇಳುವದು ನ್ಯಾಯವಾಗಿರುವದು.

ಪ್ರಾಯಶಃ ಸುವ್ರತರು ಹೇಳಿರುವ ಪರಾಶರ ಮತವು ಮನು ಮತ್ತು ಬೃಹಸ್ಪತಿಗಳ ವ್ಯವಸ್ಥೆಗಳಿಗೆ ಹೊಂದುತ್ತದೆ. ನಾವೂ ಅದರಂತೆ ಆಚರಿಸುತ್ತಿದ್ದೇವೆ. ಹಾಗೆಯೇ ಲಘುಪರಾಶರದ ಮತವು ಪ್ರಾಯಶಃ ಮನು ಮೊದಲಾದವುಗಳಿಗೆ ವಿರುದ್ಧವಾಗಿದೆ. ಆದುದರಿಂದ ಅಪ್ರಚಲಿತವೂ ಅನಾದೃತವೂ ಆಗಿರುವದು. ಲಘುಪರಾಶರ ಮತ್ತು ಬೃಹತ್ಪರಾಶರ ಇವುಗಳ ವ್ಯವಸ್ಥೆಗಳಲ್ಲಿ ಬಹಳ ಭೇದವಿರುವದೆಂದು ವಿದ್ಯಾಸಾಗರರು ಹೇಳುವದು ನ್ಯಾಯವೇ, ಏಕೆಂದರೆ "ನಷ್ಟೇಮೃತೆ" ಇತ್ಯಾದಿ ವಚನದಲ್ಲಿ ವಿಧವೆಯರು ಬೇರೆ ಪತಿಯನ್ನು ಗ್ರಹಣಮಾಡುವ ಆಜ್ಞೆಯು ಲಘುಪರಾಶರದಲ್ಲಿರುವಂತೆ ಬೃಹತ್ಪರಾಶರದಲ್ಲಿ ಇಲ್ಲ. ಇಷ್ಟಕ್ಕಾಗಿ ಬೃಹತ್ಪರಾಶರವನ್ನು ಅಪ್ರಾಮಾಣಿಕವೆಂದು ಹೇಳಬಹುದೇ ? ಸುವ್ರತನು ಸಾಕ್ಷಾತ್ತಾಗಿಯೇ ಪರಾಶರರಿಂದ ಉಪದೇಶವನ್ನು ಪಡೆದಿರುವನು. ಆದುದರಿಂದ ಅವನ ವಚನವನ್ನು ಪರಾಶರರ ಕಥನವೆಂದೇ ಸ್ವೀಕರಿಸಬೇಕು. ಹಾಗಲ್ಲದೆ ಅನಿಶ್ಚಿತ ಪುರುಷನ ವಾಕ್ಯವನ್ನು ಪರಾಶರರ ವಾಕ್ಯವೆಂದು ಹೇಳುವದು ಶುದ್ಧ ಅಸಂಗತವೂ, ಅನ್ಯಾಯವೂ ಆಗಿರುವುದು. ಅಂತಹ ಸಿದ್ಧಾಂತವನ್ನು ವಿಚಾರಶೀಲರು ಯಾರೂ ಒಪ್ಪಲಾರರು.

—••✲••—

## ಚತುರ್ಥಾಧ್ಯಾಯ

ಪರಾಶರರು ಕೇವಲ ಕಲಿಯುಗದ ಧರ್ಮವನ್ನೇ ಹೇಳಿರುವರೆಂದು ಹೇಳುವದಕ್ಕಾಗುವದಿಲ್ಲ. ಕಲಿಯುಗದ ಧರ್ಮಭ್ರಷ್ಟರೂ ಅಧರ್ಮಪೂರ್ಣರೂ ಧರ್ಮಾಚರಣದಲ್ಲಿ ಅಶಕ್ತರೂ ಆದ ಪುರುಷರುಗಳಿಗೆ ಅತಿ ಸರಳವಾದ ಸಾಮಾನ್ಯ ಆಚರಣವನ್ನು ಉಪದೇಶಿಸುವದೇ ಪರಾಶರರ ಪ್ರಯೋಜನವಾಗಿದ್ದರೆ ಮತ್ತು ಕಲಿಯುಗದ

ಪ್ರಾರಂಭದಲ್ಲಿ ಆ ಸಮಯದಿಂದಲೇ ಜನಿಸುವ ಜನಗಳೆಲ್ಲರೂ ಆಚಾರಹೀನರೂ, ಧರ್ಮಭ್ರಷ್ಟರೂ ಧರ್ಮವನ್ನು ಆಚರಿಸುವುದರಲ್ಲಿ ಅಸಮರ್ಥರೂ ಆಗಿಹೋಗುವ ರೆಂಬ ಸಿದ್ಧಾಂತವಿರುವದಾದರೆ ಪರಾಶರ ಸಂಹಿತೆಯಲ್ಲಿ ಹೇಳಿರುವ ಸದಾಚಾರ ಸಂಪನ್ನರಾದ ಧರ್ಮಾತ್ಮರುಗಳ ಆಚಾರ ವ್ಯವಸ್ಥೆಯೂ ಆಶೌಚಾದಿಗಳ ಭೇದವೂ ನಿರರ್ಥಕವೆಂತಲೂ ಅತ್ಯಂತ ಅಸಂಬದ್ಧವೆಂತಲೂ ಹೇಳಬೇಕಾಗುವದು. ಆದುದ ರಿಂದ ಕೆಳಗೆ ಬರೆಯಲ್ಪಡುವ ಲಘುಪರಾಶರ ಸ್ಮೃತಿಯ ಶ್ಲೋಕಗಳು ಕಲಿಯು ಗಕ್ಕೆ ಸಂಬಂಧಪಟ್ಟವುಗಳಲ್ಲ. ಅವಶ್ಯವಾಗಿಯೂ ಇವುಗಳು ಯುಗಾಂತರಕ್ಕೆ ಸಂಬಂಧಪಟ್ಟವುಗಳು ಎಂದು ಹೇಳಬೇಕಾಗುವುದು. ಇದೂ ಅಲ್ಲದೆ ಪರಾಶರರು ಕಲಿಯುಗದ ಧರ್ಮವನ್ನು ಹೇಳುವದಾಗಿ ಪ್ರತಿಜ್ಞೆಯನ್ನು ಮಾಡಿ ಇಲ್ಲ. ಕಲಿ ಯುಗದ ಜನಗಳ ಸ್ಥಿತಿಯು ಹೇಗೆ ಆಗುವದು ? ಎಂಬುದನ್ನು ಮಾತ್ರ ಆ ಸಂಹಿ ತೆಯ ಮೊದಲನೆಯ ಅಧ್ಯಾಯದಲ್ಲಿ ಬರೆದಿರುವರು. ಅದರಮೇಲೆ ಸಾಮಾನ್ಯ ವಾಗಿ ಧರ್ಮಾಚರಣವನ್ನು ವರ್ಣಿಸಿರುವರು

"ಅಪೂರ್ವಸ್ಸುವ್ರತೀವಿಪ್ರಃ ಅಪೂರ್ವೋವಾತಿಥಿಸ್ತಥಾ |
ವೇದಾಭ್ಯಾಸರತೋಸಿತ್ಯಂ ತ್ರಯೋಪೂರ್ವಾದಿನೆದಿನೆ ||
ಯತೀಚಬ್ರಹ್ಮಚಾರೀಚ ಪಕ್ವಾನ್ನಸ್ವಾಮಿನಾವುಭೌ ||
ತೇಷಾಮನ್ನಮದತ್ವಾಚ ಭುಕ್ತ್ವಾಚಾಂದ್ರಾಯಣಂಚರೇತ್ ||
ಯತಿಹಸ್ತೇಜಲಂದದ್ಯಾದ್ಭೈಕ್ಷ್ಯಂದದ್ಯಾತ್ಪುನರ್ಜಲಂ |
ತದ್ಭೈಕ್ಷ್ಯಂಮೇರುಣಾತುಲ್ಯಂ ತಜ್ಜಲಂಸಾಗರೋಪಮಂ ||
ಯತಯೇಕಾಂಚನಂದತ್ವಾತಾಂಬೂಲಂ ಬ್ರಹ್ಮಚಾರಿಣೆ |
ಚೌರೇಭ್ಯೋಪ್ಯಭಯಂದತ್ವಾದಾತಾಪಿ ನರಕಂ ವ್ರಜೇತ್ ||

ಕಲಿಯುಗದ ಗೃಹಸ್ಥರ ಧರ್ಮಾಚಾರಗಳನ್ನೂ ನಾಲ್ಕು ವರ್ಣಗಳ ಮತ್ತು ನಾಲ್ಕು ಆಶ್ರಮಗಳ ಸುಲಭಸಾಧ್ಯವಾದ ಧರ್ಮಗಳನ್ನೂ ಹೇಳುತ ಹೇಳುತ ಎರಡ ನೆಯ ಅಧ್ಯಾಯದಲ್ಲಿ,

"ಜಪ್ಯಂ ದೇವಾರ್ಚನಂ ಹೋಮಂ ಸ್ವಾಧ್ಯಾಯಂ ಚೈವಮಭ್ಯಸೇತ್ |
ಏಕದ್ವಿತ್ರಿ ಚತುರ್ವಿಪ್ರಾನ್ ಭೋಜಯೇತ್ಸ್ನಾತಕಾನ್ ದ್ವಿಜಃ ||
ಏಕಾಹಾಚ್ಛುದ್ಧ್ಯತೇ ವಿಪ್ರೋಯೋಗ್ನಿವೇದಸಮನ್ವಿತಃ |
ತ್ರ್ಯಹಂ ಕೇವಲವೇದಸ್ತು ದ್ವಿಹೀನೋ ದಶಭಿರ್ದಿನೈಃ |
ಸ್ವಕರ್ಮರತವಿಪ್ರಾಣಾಂಸ್ವಕಂ ಪಾಪಂನಿವೇದಯೇತ್ ||"

ಇತ್ಯಾದಿ, ಮೊದಲು ಯಾವಾಗಲೂ ಆತಿಥ್ಯವನ್ನು ಹೊಂದದೆ ಇರುವ ಅತಿಥಿಯೂ ಅಂತಹ ಬ್ರಹ್ಮಚಾರಿ ಬ್ರಾಹ್ಮಣನೂ, ನಿರಂತರವಾಗಿ ವೇದಾಭ್ಯಾಸವನ್ನು ಮಾಡುತ್ತಿರುವ ಬ್ರಾಹ್ಮಣನೂ ಈ ಮೂವರೂ ಅಪೂರ್ವ ಅತಿಥಿಗಳೆನ್ನಿಸಿಕೊಳ್ಳುವರು. ಯತಿ, ಬ್ರಹ್ಮಚಾರಿ ಇವರಿಬ್ಬರೂ ಪಕ್ವಾನ್ನಕ್ಕೆ ಅಧಿಕಾರಿಗಳು. ಇವರಿಬ್ಬರಿಗೂ ಕೊಡದೆ ಭೋಜನಮಾಡುವವನು ಚಾಂದ್ರಾಯಣ ವ್ರತವನ್ನು ಆಚರಿಸಬೇಕು. ಯತಿಯ ಹಸ್ತಕ್ಕೆ ಮೊದಲು ನೀರನ್ನು ಕೊಟ್ಟು ಭಿಕ್ಷೆಯ ಪದಾರ್ಥವನ್ನು ಕೊಟ್ಟಮೇಲೆ ಪುನಃ ನೀರನ್ನು ಕೊಡಬೇಕು. ಹೀಗೆ ಮಾಡಿದರೆ ಆ ಭಿಕ್ಷಾವಸ್ತುವು ಮೇರುವಿಗೆ ಸಮನಾಗಿಯೂ, ಆ ನೀರು ಸಮುದ್ರಕ್ಕೆ ಸಮನಾಗಿಯೂ ಆಗುವುದು. ಸನ್ಯಾಸಿಗೆ ಸುವರ್ಣವನ್ನೂ, ಬ್ರಹ್ಮಚಾರಿಗೆ ತಾಂಬೂಲವನ್ನೂ, ಕಳ್ಳನಿಗೆ ಅಭಯವನ್ನೂ ಕೊಟ್ಟರೆ ಅವನು ದಾನಮಾಡಿದವನಾದರೂ ನರಕವನ್ನು ಹೊಂದುವನು.

ಅನಂತರದಲ್ಲಿ (ಗದ್ದೆಯ ಕೆಲಸವನ್ನು ಮುಗಿಸಿದಮೇಲೆ ಸ್ನಾನಮಾಡಿ) ಜಪ, ದೇವರಪೂಜೆ, ಹೋಮ, ವೇದಪಾಠ ಇವುಗಳನ್ನು ಮಾಡಬೇಕು. ಹಾಗೆಯೇ ಒಬ್ಬನು ಇಬ್ಬರು ಮೂವರು ನಾಲ್ವರು *ಸ್ನಾತಕ ಬ್ರಾಹ್ಮಣರುಗಳಿಗೆ ಭೋಜನವನ್ನು ಮಾಡಿಸಬೇಕು. ಅಗ್ನಿಹೋತ್ರಿಯಾಗಿ ವೇದಾಧ್ಯಾಯನಮಾಡುತ್ತಿರುವ ಬ್ರಾಹ್ಮಣನಿಗೆ ಒಂದು ದಿನ ಆಶೌಚವಿರುವದು. ಅಗ್ನಿಹೋತ್ರಿಯಾಗದೆ ವೇದಾಧ್ಯಯನವನ್ನು ಮಾತ್ರ ಮಾಡತಕ್ಕ ಬ್ರಾಹ್ಮಣನಿಗೆ ಮೂರು ದಿನಗಳು ಆಶೌಚವುಂಟು, ಅಗ್ನಿ ಹೋತ್ರಿಯೂ ಅಲ್ಲದೆ ವೇದಾಧ್ಯಯನವನ್ನೂ ಮಾಡುತ್ತಿಲ್ಲವಾದರೆ ಅಂತಹ ಬ್ರಾಹ್ಮಣನಿಗೆ ಹತ್ತು ದಿನಗಳ ಆಶೌಚವು ಪೂರ್ಣವಾಗಿರುವದು ಗೋವನ್ನಾಗಲಿ ಎತ್ತನ್ನಾಗಲಿ ಒಂದು ಕಂಬದಲ್ಲಿ ಕಟ್ಟಿದಾಗ ಇವನ ಇಚ್ಛೆ ಇಲ್ಲದೇನೇ ಅದು ಮೃತವಾದರೆ ಅಕಾಮುಗೋವಧವೆನ್ನಿಸಿಕೊಳ್ಳುವದು. ಇಂತಹ ಘಟನೆಯುಂಟಾದರೆ ಆ ಪಾಪವನ್ನು ಪರಿಹಾರಮಾಡಿಕೊಳ್ಳುವ ವಿಧಿಯನ್ನು ಹೇಳಿರುವದೇನೆಂದರೆ-ವೇದವೇದಾಂಗ ಪಾರಂಗತರಾಗಿ ಧರ್ಮಶಾಸ್ತ್ರವನ್ನರಿತು ಕರ್ಮಠರಾದ ಬ್ರಾಹ್ಮಣರಲ್ಲಿ ಹೋಗಿ ತನ್ನ ಪಾಪದ ವೃತ್ತಾಂತಗಳನ್ನು ತಿಳಿಸಬೇಕು ಇತ್ಯಾದಿ ಅನೇಕ ವಿಷಯಗಳನ್ನು ಹೇಳಿರುವರು. ವೇದವ್ಯಾಸರು ಯಾವ ಸಮಯಕ್ಕೆ ಉಪಯೋಗವಾದ ಸದಾಚಾರವಿವರವನ್ನು ಕೇಳಿದರೋ ಪರಾಶರರು ಅದಕ್ಕೆ ತಕ್ಕ ಹಾಗೆ ಆ ಸಮಯದ ಜನಗಳ ಸ್ವಾಭಾವಿಕ ಧರ್ಮಸ್ಥಿತಿಯನ್ನು ಹೇಗೆ ವರ್ಣನಮಾಡಿರು

---

* ಸ್ನಾತಕರು ಮೂರು ತರನಾಗಿರುವರು. ಗುರುಗೃಹದಲ್ಲಿ ಬ್ರಹ್ಮಚರ್ಯವನ್ನು

ವರೋ. ಅದರೊಳಗೆ ಮೇಲೆ ಹೇಳಿದ ವಚನಗಳು ಎಂದಿಗೂ ಆ ಕಾಲಕ್ಕೆ ಉಪ ಯುಕ್ತಗಳೆಂದು ಹೇಳಲಾಗುವುದಿಲ್ಲ. ಏಕೆಂದರೆ,

"ಸರ್ವೇಧರ್ಮಾಃ ಕೃತೇಜಾತಾಸ್ಸರ್ವೇನಷ್ಟಾಃಕಲೌಯುಗೆ |
ಚಾತುರ್ವರ್ಣ್ಯಸಮಾಚಾರಂ ಕಿಂಚಿತ್ಸಾಧಾರಣಂವದ ||

ಧರ್ಮಗಳೆಲ್ಲವೂ ಕೃತಯುಗದಲ್ಲಿ ವ್ಯವಸ್ಥಿತಗಳಾಗಿದ್ದವು. ಕಲಿಯುಗ ದಲ್ಲಿ ಸರ್ವವೂ ನಷ್ಟವಾಗಿ ಹೋಗಿವೆ ಆದುದರಿಂದ ನಾಲ್ಕು ವರ್ಣಗಳೂ ಆಚ ರಿಸುವದಕ್ಕೆ ಯೋಗ್ಯವಾದ ಧರ್ಮವನ್ನು ಹೇಳಬೇಕೆಂದು ವ್ಯಾಸರು ಪ್ರಶ್ನೆಯನ್ನು ಮಾಡಿರುವರು. ಇದಕ್ಕೆ ಉತ್ತರವಾಗಿ ಪರಾಶರರು ಧರ್ಮನಿರ್ಣಯವನ್ನು ಹೇಳುವೆನು, ಎಂದು ಪ್ರತಿಜ್ಞೆಮಾಡಿ ಮೊತ್ತ ಮೊದಲು ಒಂದಾವರ್ತಿ ಕಲಿಯುಗದ ಜನಗಳಿಗೆ ಸ್ವಾಭಾವಿಕವಾಗಿ ಧರ್ಮದಲ್ಲಿ ಪ್ರವೃತ್ತಿಯು ಹೇಗೆ ಆಗುವದು ಎಂಬುದನ್ನು ಕಲಿಧರ್ಮ ವರ್ಣನದಲ್ಲಿ ವಿಶೇಷವಾಗಿ ಹೇಳಿದರು.

"ತ್ಯಜೇದ್ದೇಶಂಕೃತಯುಗೆ ತ್ರೇತಾಯಾಂಗ್ರಾಮಮುತ್ಸೃಜೇತ್ |
ದ್ವಾಪರೆ ಕುಲಮೇಕಂತುಕರ್ತಾರಂಚ ಕಲೌಯುಗೆ ||
ಕೃತೇಸಂಭಾಷಣಾತ್ಪಾಪಂ ತ್ರೇತಾಯಾಂ ಚೈವದರ್ಶನಾತ್ |
ದ್ವಾಪರೆಚಾನ್ನಮಾದಾಯ ಕಲೌ ಪತತಿಕರ್ಮಣಾ ||"

ಕೃತಯುಗದಲ್ಲಿ ಪತಿತನೊಂದಿಗೆ ಮಾತನಾಡಿದರೂ ತಾನು ಪಾಪಿಯಾಗುವೆ ನೆಂದು ಜನಗಳು ತಿಳಿಯುತ್ತಿದ್ದರು. ಅಲ್ಲದೆ ಪತಿತನು ವಾಸಮಾಡುತ್ತಿದ್ದ ದೇಶವನ್ನೇ ಬಿಟ್ಟುಬಿಡುತ್ತಿದ್ದರು. ತ್ರೇತಾಯುಗದಲ್ಲಿ ಪತಿತನೊಂದಿಗೆ ದರ್ಶನವ್ಯ ವಹಾರವಾದರೆ ತಮ್ಮನ್ನು ದೋಷಿಗಳೆಂದು ತಿಳಿಯುತ್ತಿದ್ದರು. ಮತ್ತು ಪತಿತ ನಿರುವ ಗ್ರಾಮವನ್ನು ಬಿಡುತ್ತಿದ್ದರು. ದ್ವಾಪರಯುಗದಲ್ಲಿ ಪತಿತನ ಅನ್ನವನ್ನು ಊಟಮಾಡಿದರೆ ಪಾಪಬರುವುದೆಂದು ತಿಳಿಯುತ್ತಿದ್ದರು. ಪತಿತನ ಕುಲವನ್ನು ತ್ಯಜಿಸುತ್ತಿದ್ದರು. ಆದರೆ ಕಲಿಯುಗದ ಜನಗಳು ಅಂತಹ ಸಂಬಂಧವು ತಮಗೆ ಉಂಟಾದರೂ ಪಾಪವು ಬರುವದೆಂದು ತಿಳಿಯುವದಿಲ್ಲ. ಪಾಪಕರ್ಮವನ್ನು ಮಾಡಿದವನನ್ನು ಮಾತ್ರ ಪಾಪಿಯೆಂದು ತಿಳಿಯುತ್ತಾರೆ. ಮತ್ತು ಅವನನ್ನು ಮಾತ್ರ ಬಿಡುತ್ತಾರೆ.

---

ಧರಿಸಿ ವೇದಾಧ್ಯಯನವನ್ನು ಮುಗಿಸದ ಮೇಲೆ ಗುರುವಿನ ಆಜ್ಞೆಯಿಂದ ಸ್ನಾತನಾಗಿ ಗೃಹಸ್ಥನಾ ದವನು ವ್ರತಸ್ನಾತಕನು, ಹೀಗೆ ವೇದಾಧ್ಯಯನವನ್ನು ಮುಗಿಸಿ ಗೃಹಸ್ಥನಾಗದೆ ಗುರುಗೃಹ ದಲ್ಲಿಯೇ ಇರತಕ್ಕವನು ವಿದ್ಯಾಸ್ನಾತಕನು ಬ್ರಹ್ಮಚಾರಿಯಾಗಿಯೇ ಇರುವವನು ಉಭಯ ಸ್ನಾತಕನು.

ಕಲಿಯುಗದ ಜನಗಳ ಧರ್ಮಭಾವವು ಬಹಳ ಹೀನದೆಶೆಯಲ್ಲಿರುವದು ಒಂದು ವಿಧವಾಗಿ ಇವರಿಗೆ ಅಧರ್ಮದ ಜ್ಞಾನವೇ ಇಲ್ಲವೆಂದರೂ ಅನುಚಿತವಾಗ ಲಾರದು. ಮತ್ತು ಇವರಿಗೆ ನಿಷಿದ್ಧಕರ್ಮದಲ್ಲಿಯೇ ಪ್ರವೃತ್ತಿಯು ಹೆಚ್ಚು ಎಂಬುವದು ಇದರಿಂದ ಸಿದ್ಧವಾಗುವದು.

" ಕೃತೇತುತತ್‌ಕ್ಷಣಾಃ ಚ್ಛಾಪಸ್ತ್ರೇತಾಯಾಂದಶಭಿರ್ದಿನೈಃ |
ದ್ವಾಪರೇಮಾಸ ಮಾತ್ರೇಣ ಕಲೌಸಂವತ್ಸರೇಣತು ||"

ಕೃತಯುಗದಲ್ಲಿ ಬ್ರಾಹ್ಮಣಶಾಪದ ಫಲವು ಶಾಪಕೊಟ್ಟ ಕ್ಷಣವೇ ಆಗುತ್ತಿದ್ದಿತು. ತ್ರೇತಾಯುಗದಲ್ಲಿ ಹತ್ತುದಿನಗಳ ಮೇಲೆಯೂ, ದ್ವಾಪರಯುಗದಲ್ಲಿ ಒಂದು ತಿಂಗಳಿನಮೇಲೆಯೂ, ಕಲಿಯುಗದಲ್ಲಿ ಒಂದು ವರ್ಷದಮೇಲೆಯೂ ಆಗುವದು. ಕಲಿಯುಗದಲ್ಲಿ ಅಧರ್ಮನಿರತರಾದ ಕಾರಣ ಬ್ರಾಹ್ಮಣರ ತೇಜಸ್ಸಿನಲ್ಲಿಯೂ, ಶಕ್ತಿಯಲ್ಲಿಯೂ ಕುಂದುಬಂದಿರುವದೆಂದು ಇದರಿಂದ ಸ್ಪಷ್ಟವಾಗುವದು.

" ಅಭಿಗಮ್ಯ ಕೃತೇದಾನಂ ತ್ರೇತಾಸ್ವಾಹೂಯದೀಯತೆ |
ದ್ವಾಪರೆ ಯಾಚಮಾನಾಯ ಸೇವಯಾದೀಯತೆ ಕಲೌ ||
ಅಭಿಗಮ್ಯೋತ್ತಮಂದಾನಮಾಹೂತಂ ಚೈವಮಧ್ಯಮಂ |
ಅಧಮಂಯಾಚ್ಯಮಾನಂಸ್ಯಾತ್ಸೇವಾದಾನಂ ಚನಿಷ್ಫಲಂ ||"

ಕೃತಯುಗದಲ್ಲಿ ದಾನಮಾಡತಕ್ಕವನು ದಾನಪಾತ್ರನ ಮನೆಗೆ ಹೋಗಿಯೂ ತ್ರೇತಾಯುಗದಲ್ಲಿ ದಾನಪಾತ್ರನನ್ನು ತನ್ನ ಮನೆಗೆ ಕರತಂದೂ, ದ್ವಾಪರದಲ್ಲಿ ದಾನಕೊಡುವವನು ಇದ್ದಲ್ಲಿಗೆ ದಾನ ತೆಗೆದುಕೊಳ್ಳುವವನು ತಾನೇ ಹೋಗಿ ಯಾಚಿಸಿಯೂ ದಾನವು ನಡೆಯುತ್ತಿತ್ತು. ಕಲಿಯುಗದಲ್ಲಿಯಾದರೋ ಯಾಚಿಸಿದರೂ ದಾನವು ಸಿಕ್ಕುವಂತಿಲ್ಲ. ದಾನವನ್ನು ತೆಗೆದುಕೊಳ್ಳಬೇಕಾದರೆ ದಾನ ಮಾಡತಕ್ಕವನ ಹಿಂದೆ ಹಿಂದೆ ತಿರುಗಿ ಅವನ ಮನಸ್ಸಿಗೆ ಸಂತೋಷವನ್ನುಂಟುಮಾಡಿದರೆ ಅಂಥವನಿಗೆ ದಾನವು ದೊರೆಯುವದು.

ಯಾಚಿಸದೇ ಇರುವ ದಾನಪಾತ್ರನ ಸವಿಾಪಕ್ಕೆ ಹೋಗಿ ಅವನಿಗೆ ದಾನವನ್ನು ಕೊಡುವದು ಉತ್ತಮದಾನವೆನಿಸುವದು. ಅಂಥವನನ್ನು ತನ್ನ ಮನೆಗೆ ಕರೆಸಿಕೊಂಡು ದಾನಮಾಡಿದರೆ ಅದು ಮಧ್ಯಮದಾನವೆನಿಸುವದು. ಯಾಚಿಸಿದ ಮೇಲೆ ದಾನಮಾಡುವದು ಅಧಮದಾನವೆನಿಸುವದು ಸೇವೆಯನ್ನು ಮಾಡಿಸಿಕೊಂಡು ಪ್ರಸನ್ನನಾಗಿ ದಾನಮಾಡುವದಾದರೆ ಅದು ನಿಷ್ಫಲವಾಗುವುದು.

ಇದನ್ನು ವಿಚಾರ ಮಾಡಿದರೆ ದ್ವಾಪರಯುಗದಲ್ಲಿಯೇ ಜನಗಳಲ್ಲಿ ಧರ್ಮ ಭಾವವು ಕಡಿಮೆಯಾಗಿತ್ತು. ಎಂಬುವದು ಸ್ಪಷ್ಟವಾಗುವದು. ಇದನ್ನು ಪರಾಶರರು ಸ್ಪಷ್ಟವಾಗಿ ತೋರಿಸಿರುವರು. ಕಲಿಯುಗದಲ್ಲಿ ಮತ್ತೂ ಕಡಿಮೆಯಾಗುತ್ತ ಬಂದು ಈಗ ಯಾರಿಗೂ ಧರ್ಮದ ಯೋಚನೆಯೇ ಇರುವುದಿಲ್ಲವೆಂದರೂ ಅನುಚಿತವಾಗಲಾರದಷ್ಟು ನಿಕೃಷ್ಟವಾಗಿ ಹೋಗಿರುವದು. ಧರ್ಮದ ಫಲವೇ ದೊರೆಯಲಾರದಷ್ಟು ಅಶ್ರದ್ಧೆಯಿಂದ ಧರ್ಮಕಾರ್ಯಗಳನ್ನು ಮಾಡುತ್ತಾರೆ. ಇದರ ಮೇಲೆ

"ಕೃತೇಚಾಸ್ಥಿಗತಾಃ ಪ್ರಾಣಾಸ್ತ್ರೇತಾಯಾಂ ಮಾಂಸಸಂಸ್ಥಿತಾಃ |
ದ್ವಾಪರೇರುಧಿರಂ ಯಾವತ್ಕಲಾವನ್ನಾದಿಷುಸ್ಥಿತಾಃ ||"

ಕೃತಯುಗದಲ್ಲಿ ಪ್ರಾಣವು ಮೂಳೆಗಳಲ್ಲಿಯೂ, ತ್ರೇತಾಯುಗದಲ್ಲಿ ಮಾಂಸದಲ್ಲಿಯೂ, ದ್ವಾಪರದಲ್ಲಿ ರಕ್ತದಲ್ಲಿಯೂ, ಕಲಿಯುಗದಲ್ಲಿ ಅನ್ನಾದಿಗಳಲ್ಲಿಯೂ ಇರುತ್ತದೆ. ಅಂದರೆ, ಕೃತಯುಗದಲ್ಲಿ ಮೂಳೆಗಳು ಕರಗುವವರೆಗೂ ಪ್ರಾಣಧಾರಣವನ್ನು ಮಾಡುವಷ್ಟು ಶಕ್ತಿಯುಳ್ಳವರಾಗಿಯೂ, ಜಿತೇಂದ್ರಿಯರಾಗಿಯೂ ಇದ್ದರು. ತ್ರೇತಾಯುಗದಲ್ಲಿ ಮಾಂಸವು ಕ್ಷೀಣವಾಗುವವರೆಗೂ ಜೀವಿಸುವ ಶಕ್ತಿಯುಳ್ಳವರಾಗಿದ್ದರು. ದ್ವಾಪರದಲ್ಲಿ ರಕ್ತವು ಶೋಷಿಸಿ ಹೋಗುವವರೆಗೂ ಪ್ರಾಣವನ್ನು ಧರಿಸುತ್ತಿದ್ದರು. ಆದರೆ ಕಲಿಯುಗದಲ್ಲಿ ಒಂದೆರಡು ವೇಳೆ ಅನ್ನವು ದೊರೆಯದ ಮಾತ್ರದಿಂದಲೇ ಪ್ರಾಣವನ್ನು ಉಳಿಸಿಕೊಳ್ಳುವುದು ಕಠಿನವಾಗುವುದು. ಕಲಿಯುಗದ ಮನುಷ್ಯರಲ್ಲಿ ಸಹನೆಯು ಇರುವುದಿಲ್ಲ. ಇವರು ಬಹಳ ಶಕ್ತಿಯಿಲ್ಲದವರಾಗಿರುವರು. ಊಟ ಮಾಡದಿದ್ದರೂ ಜೀವಿಸಿ ಇರಲಾರರು. ಅದುದರಿಂದಲೇ ಶಕ್ತಿಯಿಂದ ಸಾಧಿಸಬೇಕಾದ ಶಾಸ್ತ್ರನಿಯಮಗಳನ್ನು ಪಾಲಿಸಲಾರರು. ಮುಂದೆ,

"ಧರ್ಮೋ ಜಿತೋಹ್ಯಧರ್ಮೇಣ ಜಿತಸ್ಸತ್ಯೋಽನೃತೇನಚ |
ಜಿತಾಭೃತ್ಯೈಶ್ಚರಾಜಾನಃ ಸ್ತ್ರೀಭಿಶ್ಚ ಪುರುಷಾಜಿತಾಃ ||
ಸೀದನ್ತಿಚಾಗ್ನಿಹೋತ್ರಾಣಿ ಗುರುಪೂಜಾಪ್ರಣಶ್ಯತಿ |
ಕುಮಾರ್ಯಶ್ಚ ಪ್ರಸೂಯನ್ತೆ ತಸ್ಮಿನ್ ಕಲಿಯುಗೆಸದಾ ||"

ಧರ್ಮಕ್ಕಿಂತ ಅಧರ್ಮವು ಪ್ರಬಲವಾಗುವದು. ಸತ್ಯಕ್ಕಿಂತ ಅಸತ್ಯವು ಪ್ರಧಾನವೆಂದು ತಿಳಿಯಲಾರಂಭವಾಗುವದು ರಾಜರು ಪ್ರಜೆಗಳ ಅಧೀನದಲ್ಲಿರುವರು. ಪುರುಷರು ಸ್ತ್ರೀವಶರಾಗಿರುವರು. ಬ್ರಾಹ್ಮಣರು ಅಗ್ನಿಹೋತ್ರವನ್ನು

ಬಿಡುವರು. ಗುರುಸೇವೆಯು ಲುಪ್ತವಾಯಿತು. ಸ್ತ್ರೀಯರು ವಿವಾಹವಿಲ್ಲದಿರುವಾಗಲೇ ಗರ್ಭಿಣಿಯರಾಗುವರು. ಇವುಗಳು ಕಲಿಯುಗದಲ್ಲಿ ಸದಾ ಕಂಡುಬರುತ್ತವೆ. ಇದರಿಂದ ಕಲಿಯುಗದಲ್ಲಿ ಧರ್ಮವಿರುವದಿಲ್ಲ. ಧಾರ್ಮಿಕರಿಲ್ಲ. ಸದಾ ಅಧರ್ಮದಲ್ಲಿಯೇ ಆಸಕ್ತರಾಗಿರುವರು, ಎಂಬುವದು ಸಿದ್ಧವಾಗುವದು.

ಕಲಿಯುಗದಲ್ಲಿ ಸರ್ವಧರ್ಮಗಳೂ ನಷ್ಟವಾಗಿಹೋಗುವದು. ಪಾಪಕರ್ಮವನ್ನು ಆಚರಿಸುವ ಜನಗಳಲ್ಲಿ ಜುಗುಪ್ಸೆಯುಂಟಾಗುವದಕ್ಕೆ ಬದಲಾಗಿ ಅಂತಹ ಜನಗಳಿಗೆ ಆದರವು ಧಾರಾಳವಾಗಿ ನಡೆಯುವಷ್ಟು ಧರ್ಮದ ಗೌರವವು ಅತಿ ತುಚ್ಛವಾಗುವದು ಬ್ರಾಹ್ಮಣರ ಶಕ್ತಿಯೂ ತೇಜಸ್ವಿತೆಯೂ ಕಂದಿ ಕುಂದಿ ಹೋಗುವದು ಅಲ್ಪಸ್ವಲ್ಪ ಧರ್ಮಾಚರಣವು ಕಂಡುಬಂದರೂ ಅದರ ಫಲವೇ ದೊರೆಯದೆ ಇರುವಷ್ಟು ಅಶ್ರದ್ಧೆಯಿಂದ ಆಚರಿಸಲ್ಪಡುವದು. ನಿಯಮಧರರಾದ ಜಿತೇಂದ್ರಿಯ ಪುರುಷರು ಇಲ್ಲದಂತೆಯೇ ಆಗುವದು. ಸಾರವೇನೆಂದರೆ—ಧರ್ಮವಿಲ್ಲದ ಮೇಲೆ ಅಧರ್ಮವು ಪ್ರಬಲಿಸುವದು. ಜನಗಳು ಸತ್ಯಪರಾಙ್ಮುಖರಾಗುವರು. ಮಿಥ್ಯಾಚಾರಗಳು ಹೆಚ್ಚುವರು. ಪುರುಷರು ಸ್ತ್ರೀಯರವಶರಾಗಿರುವರು. ಬ್ರಾಹ್ಮಣರು ಅಗ್ನಿಹೀನರಾಗುವರು. ಹೀಗಾಗುವದೇ ಕಲಿಯುಗಧರ್ಮವು.

ಕಲಿಯುಗದ ಜನಗಳೆಲ್ಲರೂ ಅಧರ್ಮವನ್ನೇ ಆಚರಿಸುವರು ಎಂಬುದೇ ಸಿದ್ಧಾಂತವಾಗುವದಾದರೆ ಕಠೋರಧರ್ಮನಿಷ್ಠರೂ, ಯತಿಗಳೂ, ಬ್ರಹ್ಮಚಾರಿಗಳೂ, ಸನ್ಯಾಸಿಗಳೂ, ಅಗ್ನಿಹೋತ್ರಿಗಳೂ, ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರೂ, ವೇದವೇದಾಂಗಪಾರಂಗತರೂ, ಧರ್ಮಶಾಸ್ತ್ರವನ್ನರಿತವರೂ, ಆತ್ಮಜ್ಞಾನಿಗಳೂ, ಯಜ್ಞಮಾಡುವವರೂ, ಇತ್ಯಾದಿ ಧರ್ಮವ್ರತರಾದ ಸದಾಚಾರ ಸಂಪನ್ನರು ಈ ಕಲಿಯುಗದಲ್ಲಿ ಯಾರೂ ಇರಕೂಡದು ವಿದ್ಯಾಸಾಗರರೂ ಕೂಡ ಇದನ್ನು ತೋರಿಸಿರುವರು.

"ತಪಃಪರಂ ಕೃತಯುಗೆ ತ್ರೇತಾಯಾಂ ಜ್ಞಾನಮುಚ್ಯತೆ |
ದ್ವಾಪರೆಯಜ್ಞಮೇವಾಹುರ್ದಾನಮೇಕಂಕಲೌಯುಗೆ ||

ವಿದ್ಯಾಸಾಗರರು ಇದರ ಅರ್ಥವನ್ನು ಹೀಗೆ ಬರೆದಿರುವರು. ಕೃತಯುಗದಲ್ಲಿ ತಪಸ್ಸು ಪ್ರಧಾನಧರ್ಮವಾಗಿಯೂ, ತ್ರೇತಾಯುಗದಲ್ಲಿ ಜ್ಞಾನವು ಪ್ರಧಾನವಾಗಿಯೂ, ದ್ವಾಪರಯುಗದಲ್ಲಿ ಯಜ್ಞವು ಪ್ರಧಾನವಾಗಿಯೂ, ಕಲಿಯುಗದಲ್ಲಿ ದಾನವು ಪ್ರಧಾನಧರ್ಮವಾಗಿಯೂ ಇರುವದು.

ಕೃತಯುಗದ ಜನಗಳಲ್ಲಿ ಸರ್ವಾಧಿಕಶಕ್ತಿಯು ಇದ್ದಿತು. ಆದುದರಿಂದ ಅಧಿಕ ಪರಿಶ್ರಮಸಾಧ್ಯವಾದ ತಪಸ್ಸು ಆ ಯುಗದ ಪ್ರಧಾನಧರ್ಮವಾಗಿದ್ದಿತು. ಮುಂದೆ ಮುಂದೆ ಯುಗಗಳಲ್ಲಿ ಮನುಷ್ಯರ ಶಕ್ತಿಯು ಕ್ರಮಕ್ರಮವಾಗಿ ಕ್ಷೀಣವಾಗುವದರಿಂದ ಅಲ್ಪಶ್ರಮಸಾಧ್ಯಗಳಾದ ಜ್ಞಾನ, ಯಜ್ಞ, ದಾನಗಳು ಪ್ರಧಾನ ಧರ್ಮಗಳಾದವು.

ಹೀಗೆ ಹಿಂದೆ ಹೇಳಿದ ಪರಾಶರರ ವಚನಗಳನ್ನು ಕಲಿಯುಗದ ವಿಷಯಗಳೆಂದು ಹೇಳಲಾಗುವದಿಲ್ಲ. ಇದರಿಂದ ಪರಾಶರರು ಕಲಿಯುಗದ ಧರ್ಮವನ್ನು ಮಾತ್ರ ಹೇಳಲಿಲ್ಲವೆಂದು ಸಿದ್ಧವಾಗುವದು. ಆದುದರಿಂದ ಪರಾಶರಸ್ಮೃತಿಗೂ ಇತರ ಹತ್ತೊಂಬತ್ತು ಸ್ಮೃತಿಗಳಿಗೂ ಭೇದವೇನೂ ಇರುವದಿಲ್ಲ.

ಪರಾಶರಸ್ಮೃತಿಯ ಸಂಗ್ರಹಕಾರನು ಚತುರ್ವರ್ಣಗಳ ಆಶ್ರಮ ಧರ್ಮಗಳನ್ನು ವರ್ಣನಮಾಡಲಿಲ್ಲವೆಂತಲೂ, ಪರಾಶರರು ಹೇಳಿದ ಶುದ್ಧಿ ಪ್ರಕರಣವನ್ನು ಸಂಗ್ರಹಿಸಿರುವದೇ ಅವನ ಪ್ರಧಾನ ಪ್ರಯೋಜನವಾಗಿದ್ದಿತೆಂತಲೂ ಈ ಕೆಳಗೆ ಬರೆಯುವ ಸೂಚಿಯಿಂದ ಪಾಠಕರಿಗೆ ಸ್ಪಷ್ಟವಾಗುವದು.

ಪ್ರಥಮಾಧ್ಯಾಯದಲ್ಲಿ ೬೪ ಶ್ಲೋಕಗಳಿವೆ. ಅವುಗಳೊಳಗೆ ೩೬ ಶ್ಲೋಕಗಳಲ್ಲಿ ಮುನಿಗಳ ಪ್ರಶ್ನೆ ವೇ ಮೊದಲಾದ ಕಲಿಯುಗದ ಸ್ವಾಭಾವಿಕವಾದ ಧರ್ಮಭಾಗದ ವರ್ಣನವಿರುವದು ಉಳಿದ ೨೮ ಶ್ಲೋಕಗಳಲ್ಲಿ ನಾಲ್ಕು ವರ್ಣಗಳ ಆಚಾರಗಳು ಮತ್ತು ರಾಜಧರ್ಮದ ವಿಷಯದಲ್ಲಿ ಒಂದೆರಡು ಮಾತುಗಳು ಇವೆ.

ದ್ವಿತೀಯಾಧ್ಯಾಯದಲ್ಲಿ ೧೬ ಶ್ಲೋಕಗಳಿವೆ ಅವುಗಳಲ್ಲಿ ನಾಲ್ಕು ವರ್ಣಗಳ ಗೃಹಸ್ಥರ ಕರ್ತವ್ಯಾಕರ್ತವ್ಯಗಳು ನಿರ್ಣಯಿಸಲ್ಪಟ್ಟಿವೆ

ಮೂರನೆ ಅಧ್ಯಾಯದಲ್ಲಿ ೪೪ ಶ್ಲೋಕಗಳಿವೆ ಅವುಗಳೆಲ್ಲದರಲ್ಲಿಯೂ ಶುದ್ಧಿಯ ವರ್ಣನವಿರುವದು. ಅಂದರೆ, ಆಶೌಚವೇ ಮೊದಲಾದುದರ ವ್ಯವಸ್ಥೆಯು ಇರುವದ. ಈ ಅಧ್ಯಾಯದ ಆರಂಭದಲ್ಲಿಯೇ,

"ಅತಶ್ಶುದ್ಧಿಂ ಪ್ರವಕ್ಷ್ಯಾಮಿ ಜನನೇ ಮರಣೇ ತಥಾ |"

ಜನನಾಶೌಚ ಮರಣಾಶೌಚಗಳನ್ನು ಹೇಳುವೆನೆಂದು ಬರೆಯಲ್ಪಟ್ಟಿದೆ.

ನಾಲ್ಕನೆ ಅಧ್ಯಾಯದಲ್ಲಿ ೩೦ ಶ್ಲೋಕಗಳಿವೆ. ಇದರಲ್ಲಿ ಮೊದಲಿನಿಂದ ಪ್ರಾಯಶ್ಚಿತ್ತವು ಹೇಳಲ್ಪಟ್ಟಿದೆ. ೧೮, ೧೯, ೨೦, ಈ ಶ್ಲೋಕಗಳಲ್ಲಿ ಪುತ್ರ ಮತ್ತು ಪುತ್ರಸಂಗ್ರಹ ಇವುಗಳ ವ್ಯವಸ್ಥೆಯು ಹೇಳಲ್ಪಟ್ಟಿರುವದು. ಮತ್ತು

ಜ್ಯೇಷ್ಠನು ಅವಿವಾಹಿತನಾಗಿರುವಾಗ ಕನಿಷ್ಠನ ವಿವಾಹ ನಿಷೇಧವನ್ನೂ ಹಾಗೆಯೇ ಅದರ ಪ್ರಾಯಶ್ಚಿತ್ತವನ್ನೂ ಹೇಳಿ ಪ್ರಸಂಗವಶದಿಂದ ನಾಲ್ಕು ಶ್ಲೋಕಗಳಲ್ಲಿ ವಿಧವೆಯರ ಆಚಾರದ ವ್ಯವಸ್ಥೆಯನ್ನು ಹೇಳಿರುವರು.

ಪಂಚಮಾಧ್ಯಾಯದಲ್ಲಿ ೨೬ ಶ್ಲೋಕಗಳಿವೆ. ಎಲ್ಲದರಲ್ಲಿಯೂ ಶುದ್ಧಿಯ ವರ್ಣನವಿರುವದು.

೬ ನೇ ಅಧ್ಯಾಯದಲ್ಲಿ ೭೨ ಶ್ಲೋಕಗಳಿವೆ. ಎಲ್ಲದರಲ್ಲಿಯೂ ಶುದ್ಧಿಯ ವರ್ಣನವೇ.

೭ ನೇ ಅಧ್ಯಾಯದಲ್ಲಿ ೪೩ ಶ್ಲೋಕಗಳಿವೆ. ಎಲ್ಲವೂ ಶುದ್ಧಿವಿಷಯಗಳೇ ಆಗಿವೆ.

ವೃಷಲೀಗಮನದ ಪ್ರಾಯಶ್ಚಿತ್ತದಲ್ಲಿ ಮಾತ್ರ ವೃಷಲೀ ಎಂದರೆ ಯಾರೆಂಬುದನ್ನು ತೋರಿಸಿ ಅದರ ಜತೆಯಲ್ಲಿ “ಅಷ್ಟವರ್ಷಾಭವೇದ್ಗೌರೀ” ಇತ್ಯಾದಿ ವಚನಗಳು ಬರೆಯಲ್ಪಟ್ಟಿವೆ. ಕನ್ಯಾದಾನಕ್ಕೆ ಮೊದಲು ಕನ್ಯೆಯು ರಜಸ್ವಲೆಯಾದರೆ ಅವಳ ತಂದೆ, ತಾಯಿ, ಸಹೋದರರು ಪಾಪಭಾಜನರಾಗುವ ಕ್ರಮವು ವರ್ಣಿತವಾಗಿದೆ. ಆದರೆ ನಾಲ್ಕು ಶ್ಲೋಕಗಳಲ್ಲಿಯೇ ಇವುಗಳನ್ನೆಲ್ಲವನ್ನೂ ವರ್ಣಿಸಿರುವರು.

೮ ನೇ ಅಧ್ಯಾಯದಲ್ಲಿ ೪೯ ಶ್ಲೋಕಗಳಿವೆ. ಎಲ್ಲದರಲ್ಲಿಯೂ ಗೋವಧದ ಪ್ರಾಯಶ್ಚಿತ್ತವು ಹೇಳಿರುವದು.

೯ ನೇ ಅಧ್ಯಾಯದಲ್ಲಿ ೬೨ ಶ್ಲೋಕಗಳಿವೆ. ೧೦ ನೇ ಅಧ್ಯಾಯದಲ್ಲಿ ೭೨ ಶ್ಲೋಕಗಳಿವೆ. ೧೧ ನೇ ಅಧ್ಯಾಯದಲ್ಲಿ ೫೪ ಶ್ಲೋಕಗಳೂ, ೧೨ ನೇ ಅಧ್ಯಾಯದಲ್ಲಿ ೭೫ ಶ್ಲೋಕಗಳೂ ಇವೆ. ಇವುಗಳೆಲ್ಲದರಲ್ಲಿಯೂ ಪ್ರಾಯಶ್ಚಿತ್ತವರ್ಣನವೇ ಇರುವದು.

ಇದನ್ನು ನೋಡಿದರೆ ಪರಾಶರಸ್ಮೃತಿಯಲ್ಲಿ ಆಚಾರನಿರ್ಣಯವಿರುವದೇ? ಅಥವಾ ಪ್ರಾಯಶ್ಚಿತ್ತ ವರ್ಣನವಿರುವದೇ? ಎಂಬುವದು ಸ್ಪಷ್ಟವಾಗುವದು. ಇದರಲ್ಲಿ ಜಾತಕರ್ಮ ಮೊದಲಾದವುಗಳ ವ್ಯವಸ್ಥೆಯು ಇಲ್ಲ. ದ್ವಿಜಾತಿಗಳ ಮುಖ್ಯ ಸಂಸ್ಕಾರವಾದ ಉಪನಯನದ ವರ್ಣನವಿಲ್ಲ. ಕನ್ಯೆಯ ವಿವಾಹಕಾಲದ ನಿರ್ಣಯವು ವಿನಾ ಇನ್ನಾವ ವಿಧಿಯೂ ಇರುವದಿಲ್ಲ. ಲಘುಪರಾಶರದಲ್ಲಿ ಆಚಾರದ ವಿಷಯದಲ್ಲಿಯೂ, ಧರ್ಮದ ವಿಷಯದಲ್ಲಿಯೂ ಪ್ರಸಂಗವಶದಿಂದ ಅಲ್ಲಲ್ಲಿ ಒಂದೆರಡು ಶ್ಲೋಕಗಳು ಇರುತ್ತವೆಯಲ್ಲದೆ ಮತ್ತಾವದೂ ಇಲ್ಲ. ಈ ಸಂಹಿತೆಯ ಸಂಗ್ರಹಕಾರನ ಉದ್ದೇಶವು ಪ್ರಾಯಶ್ಚಿತ್ತದ ವ್ಯವಸ್ಥೆಯನ್ನು ಸಂಗ್ರ

ಹಿಸುವದೇ ಆಗಿದ್ದಿತು. ಪ್ರಸಂಗವಶದಿಂದ ಹೇಳಿದ ಒಂದೆರಡು ಮಾತುಗಳಿಂದ ವಿಧಿಯನ್ನಾಗಲಿ, ನಿಷೇಧವನ್ನಾಗಲಿ ನಿಶ್ಚಯಿಸಲಾಗುವದಿಲ್ಲ. ಹಾಗೆ ನಿಶ್ಚಯಿಸುವದನ್ನು ಶಾಸ್ತ್ರಾನಭಿಜ್ಞರಾದ ಈಗಿನ ನವೀನ ರೀತಿಯ ಜನಗಳೇ ಮಾಡಬಲ್ಲರು. ಹಿಂದೂಶಾಸ್ತ್ರದ ಮರ್ಮವನ್ನರಿತವರು ಯಾರೂ ಹಾಗೆ ನಿರ್ಣಯಿಸಲಾರರು. ಪೂರ್ಣಧ್ಯಾನವಿಟ್ಟು ಶಾಸ್ತ್ರವಚನಗಳ ಹಿಂದು ಮುಂದಿನ ಭಾಗಗಳನ್ನು ನೋಡಿ ಇತರಗ್ರಂಥಗಳೊಂದಿಗೆ ಸಮನ್ವಯಮಾಡಿಕೊಂಡು ಶಾಸ್ತ್ರದ ಸರಿಯಾದ ತಾತ್ಪರ್ಯವನ್ನೂ ಅದರ ಸ್ಥಳ ಮತ್ತು ಪ್ರಯೋಗಗಳನ್ನೂ ನಿಶ್ಚಯಮಾಡಬೇಕು.

ಈಗಿನಂತಹ ಶಾಸ್ತ್ರಮೀಮಾಂಸೆಯು ಸಹಜರೀತಿಯು ಪೂರ್ವದಲ್ಲಿದ್ದಿದ್ದರೆ ನಿರ್ಣಯಸಿಂಧು, ಧರ್ಮಸಿಂಧು ಮೊದಲಾದ ನಿಬಂಧನೆಗಳನ್ನು ಬರೆಯುವದಕ್ಕೆ ವಿದ್ವಾಂಸರುಗಳು ಅಷ್ಟು ಶಾಸ್ತ್ರಗಳನ್ನು ಪರಿಶೋಧಿಸಬೇಕಾಗಿಯೇ ಇರಲಿಲ್ಲ. ಮುನಿವಚನಗಳ ಅಭಿಪ್ರಾಯಗಳು ಸರಿಯಾಗಿ ತಿಳಿಯುವುದಕ್ಕೆ ಸಾಧ್ಯವಿಲ್ಲದುದರಿಂದ ನಾವು ಒಂದೊಂದು ವೇಳೆ ಅಪಸಿದ್ಧಾಂತವನ್ನು ಮಾಡಿಕೊಳ್ಳಬಾರದೆಂಬುವದೇ ಎಲ್ಲಾ ಶಾಸ್ತ್ರಗಳಿಗೂ ಏಕವಾಕ್ಯತೆಯನ್ನು ಮಾಡಿಕೊಳ್ಳುವದರ ತಾತ್ಪರ್ಯವಾಗಿರುವದು. ಗ್ರಂಥದ ಸರಿಯಾದ ತಾತ್ಪರ್ಯವನ್ನು ಅರಿಯುವದಕ್ಕೆ ಟೀಕಾಕಾರರ ವ್ಯಾಖ್ಯಾನವನ್ನು ನೋಡಬೇಕಾದ ಅವಶ್ಯಕತೆಯು ಇರುವಂತೆ ಒಂದೇ ವಿಷಯದಲ್ಲಿ ಭಿನ್ನಭಿನ್ನ ಸಂಹಿತೆಗಳು ಹೇಗೆ ವ್ಯವಸ್ಥೆಯನ್ನು ಮಾಡಿರುವವೆಂಬುವದನ್ನು ಅವಶ್ಯವಾಗಿಯೂ ನೋಡಬೇಕು. ಆವುದಾದರೊಂದು ವಿಷಯವು ಒಂದು ಸಂಹಿತೆಯಲ್ಲಿ ಸ್ಥೂಲರೀತಿಯಿಂದ ವಿಚಾರವಾಡಿ ಇದ್ದರೆ ಮತ್ತೊಂದು ಸಂಹಿತೆಯಲ್ಲಿ ಅದೇ ವಿಷಯವು ವಿಸ್ತಾರವಾಗಿ ಬರೆಯಲ್ಪಟ್ಟಿರುವದು ಆದುದರಿಂದ ಒಂದು ಸಂಹಿತೆಯು ಮತ್ತೊಂದಕ್ಕೆ ವ್ಯಾಖ್ಯಾನರೂಪವಾಗಿರುವದು. ಒಂದು ಸ್ಮೃತಿಯಲ್ಲಿ ಸ್ಥೂಲರೂಪದಲ್ಲಿ ಹೇಳಿದ ವಿಷಯದ ತಾತ್ಪರ್ಯವನ್ನು ಮತ್ತೊಂದು ಸಂಹಿತೆಯ ವಿಸ್ತಾರವಾದ ವರ್ಣನದಿಂದ ನಿಶ್ಚಯಿಸಬೇಕು. ಆದುದರಿಂದಲೇ "ಗ್ರಂಥಸ್ಯಗ್ರಂಥಾಂತರಂಟೀಕಾ" ಎಂಬ ಮಾತುಪ್ರಚಾರದಲ್ಲಿರುವದು.

ಆದುದರಿಂದ ಆವ ಶಾಸ್ತ್ರದ ವ್ಯವಸ್ಥೆಯು ಎಲ್ಲಿ ಹೇಗೆ ಆಗುವದು? ಎಂಬುವದನ್ನು ನಿಶ್ಚಯಿಸುವದಕ್ಕಾಗಿ ಇತರ ಶಾಸ್ತ್ರದೊಂದಿಗೆ ಏಕವಾಕ್ಯತೆಯನ್ನು ಮಾಡಿಕೊಳ್ಳುವದು ಅತ್ಯಂತಾವಶ್ಯಕವು. ಆದರೆ ನಮ್ಮ ಮನಸ್ಸಿನಲ್ಲಿ ಒಂದು ಸಿದ್ಧಾಂತವನ್ನು ಕಲ್ಪಿಸಿಕೊಂಡು ಆಮೇಲೆ ಏಕವಾಕ್ಯತೆಯನ್ನು ಮಾಡುವದಾದರೆ ನಮ್ಮ ಪ್ರಯೋಜನವು ಸಿದ್ಧವಾಗುವದಿಲ್ಲ ಪಂ|| ಈಶ್ವರಚಂದ್ರವಿದ್ಯಾಸಾಗರರು

ಪರಾಶರವಚನವನ್ನು ಕಲಿಯುಗದಲ್ಲಿ ಸರ್ವಶ್ರೇಷ್ಠವೆಂದು ತೋರಿಸಿ ಪ್ರಾಚೀನ ಶಾಸ್ತ್ರೀಯ ರೀತಿಯನ್ನು ತಿರಸ್ಕರಿಸಿರುವರು. ಪರಾಶರ ಸಂಹಿತೆಯು ಪ್ರಚಾರಕ್ಕೆ ಬಂದಮೇಲೆ ಕಲಿಯುಗದಲ್ಲಿ ಯುಧಿಷ್ಠಿರನಿಗೆ ಉಪದೇಶಿಸುವ ಕಾಲದಲ್ಲಿ ವೃದ್ಧ ಗೌತಮಸಂಹಿತೆಯಲ್ಲಿ—

“ ಭಾರತಂಮಾನವೋಧರ್ಮಃ ಸಾಂಗೋವೇದಶ್ಚಿಕಿತ್ಸಿತಂ |
ಆಜ್ಞಾಸಿದ್ಧಾನಿ ಚತ್ವಾರಿನಹನ್ತವ್ಯಾನಿಹೇತುಭಿಃ ||”

ಭಾರತ, ಮನುಧರ್ಮಶಾಸ್ತ್ರ, ಅಂಗಸಹಿತವಾದ ವೇದ, ಆಯುರ್ವೇದ ಇವು ನಾಲ್ಕು ಆಜ್ಞಾಸಿದ್ಧಗಳು. ಯುಕ್ತಿಗಳಿಂದ ಇವುಗಳನ್ನು ಉಲ್ಲಂಘಿಸಬಾರದು, ಎಂದು ಹೇಳಿರುವದು. ಈ ಪ್ರಮಾಣದಿಂದ ವಿದ್ಯಾಸಾಗರಮಹಾಶಯರು ನಿರ್ಣಯಮಾಡಿದ ಪರಾಶರರ ಸರ್ವ ಪ್ರಧಾನತೆಯು ತಿರಸ್ಕೃತವಾಯಿತು. ಈ ಕಾರಣದಿಂದ ಪರಾಶರರ ಆಪ ವ್ಯವಸ್ಥೆಯಾದರೂ ಮನುವಿಗೆ ವಿರುದ್ಧವಾಗುವದಾದರೆ ಕಲಿಯುಗದಲ್ಲಿ ಮಾನ್ಯವಾಗಲಾರದು ಮುಖ್ಯವಾಗಿ ಕಲಿಯುಗದಲ್ಲಿ ಇಂತಹ ತೊಂದರೆಗಳು ಸಂಭವಿಸುವದೆಂದು ಸರ್ವಾಂತರ್ಯಾಮಿಯಾದ ಭಗವಂತನು “ ಭಾರತಂ ಮಾನವೋ ಧರ್ಮಃ ” ಇತ್ಯಾದಿ ವಾಕ್ಯಗಳನ್ನು ಧರ್ಮರಾಯನ ವ್ಯಾಜ್ಯದಿಂದ ಸರ್ವ ಜನಗಳಿಗಾಗಿ ಹೇಳಿರುವನೆಂದು ತೋರುತ್ತದೆ. ಇಲ್ಲದಿದ್ದರೆ ವಿದ್ಯಾಸಾಗರರಂತಹ ಕಲಿಯುಗದ ಪಂಡಿತರ ಧರ್ಮವ್ಯಾಖ್ಯಾನದ ಪ್ರವಾಹದಲ್ಲಿ ಮನ್ವಾದಿ ಧರ್ಮಶಾಸ್ತ್ರಗಳೆಲ್ಲವೂ ಮುಳಗಿಹೋಗುತ್ತಿದ್ದವು. ಕಾಲಗತಿಯು ವಿಚಿತ್ರವಾದುದು. ಟೀಕಾಕಾರರಾದ ಮಾಧವಾಚಾರ್ಯರ ಮತವೊಂದನ್ನೇ ಎತ್ತಿಕೊಂಡು ಪಂ|| ಈಶ್ವರಚಂದ್ರ ವಿದ್ಯಾಸಾಗರರಂತಹ ಪುರುಷರು ಈಗ ಪರಾಶರರ ವಚನವು ಮನ್ವಾದಿ ಧರ್ಮಶಾಸ್ತ್ರಗಳಿಗೆ ವಿರುದ್ಧವಾಗಿದ್ದರೂ ಕಲಿಯುಗದಲ್ಲಿ ಮಾನ್ಯವೆಂದು ಕಲ್ಪಿಸಿ ವೇದ, ವಿಷ್ಣು, ಬೃಹಸ್ಪತಿ ಮತ್ತು ವ್ಯಾಸರೇ ಮೊದಲಾದವರ ನಿರ್ಣಯವನ್ನು ಖಂಡನಮಾಡುವ ಸಾಹಸವನ್ನು ಮಾಡಲಾರಂಭಿಸಿರುವರು. ಹಾಗೆಯೇ ಬಹುಜನಗಳು ಈ ಅನರ್ಥಕಾರಕ ಸಮ್ಮತಿಯನ್ನು ಒಪ್ಪಿಕೊಂಡು ಧರ್ಮ ಭ್ರಷ್ಟರಾಗುತ್ತಿರುವರು. ಇದೆಲ್ಲವನ್ನೂ ನೋಡಿದರೆ “ ಧರ್ಮೋಽಜಿತೋಽಹ್ಯ ಧರ್ಮೇಣ ” ಇತ್ಯಾದಿ ವಚನಗಳಲ್ಲಿ ಹೇಳಿದ ಕಲಿಯುಗದ ಪ್ರಭಾವವು ಸಾರ್ಥಕವಾಗುತ್ತಿರುವದೆಂದು ತೋರುವದು.

## ಪಂಚಮಾಧ್ಯಾಯ

ಪರಾಶರವಚನವು ಮನುವಚನಕ್ಕೆ ವಿರುದ್ಧವಾಗಿದ್ದರೂ ಮಾನ್ಯವಾದು ದೆಂದು ಇಷ್ಟುಮಾತ್ರ ಹೇಳಿದುದರಿಂದ ಪಂ|| ಈಶ್ವರಚಂದ್ರ ವಿದ್ಯಾಸಾಗರರಿಗೆ ಧೈರ್ಯವುಂಟಾಗಲಿಲ್ಲ. ಆದುದರಿಂದ ಇವರು ತಮ್ಮ ವಿಧವಾವಿವಾಹ ವಿಷಯಕ ಪುಸ್ತಕದಲ್ಲಿ ಮನುವಚನಕ್ಕೆ ವಿರುದ್ಧವಾದರೂ ಇತರ ಧರ್ಮಶಾಸ್ತ್ರಗಳೂ ಕೂಡ ಪ್ರಚಲಿತಗಳಾಗಿವೆಯಾದುದರಿಂದ ಮನುವಚನಕ್ಕೆ ವಿರುದ್ಧವಾದಮಾತ್ರದಿಂದಲೇ ಯಾವ ವ್ಯವಸ್ಥೆಯನ್ನೂ ಸ್ವೀಕರಿಸಬಾರದೆಂದು ಹೇಳಲಾಗುವುದಿಲ್ಲವೆಂದು ಬರೆದಿರುವರು. ಇದು ಸರಿಯಲ್ಲ.

ಅವರು ತಮ್ಮ ಪುಸ್ತಕದಲ್ಲಿ—

“ತ್ರಿಂಶದ್ವರ್ಷೋ೯ವಹೇತ್ಕನ್ಯಾಂ ಹೃದ್ಯಾಂದ್ವಾದಶವಾರ್ಷಿಕೀಂ |
ತ್ರ್ಯಷ್ಟವರ್ಷೋಽಷ್ಟವರ್ಷಾಂ ವಾಧರ್ಮೇಸೀದತಿಸತ್ವರಃ ||”

ಮೂವತ್ತು ವರ್ಷದ ವಯಸ್ಸಿನವನು ಹನ್ನೆರಡುವರ್ಷ ವಯಸ್ಸಿನ ಕನ್ಯೆಯನ್ನು ವಿವಾಹಮಾಡಿಕೊಳ್ಳಬೇಕು. 24 ವರ್ಷ ವಯಸ್ಸಿನವನು 8 ವರ್ಷದ ಕನ್ಯೆಯನ್ನು ವಿವಾಹಮಾಡಿಕೊಳ್ಳಬೇಕು. ಈ ಸಮಯವನ್ನು ಅತಿಕ್ರಮಿಸಿ ವಿವಾಹಮಾಡಿಕೊಂಡರೆ ಧರ್ಮಭ್ರಷ್ಟನಾಗುವನು. ಇಲ್ಲಿ ಮನುವು ವಿವಾಹಕ್ಕೆ ಎರಡು ಕಾಲಗಳನ್ನು ತೋರಿಸಿರುವನು. ಈ ಎರಡು ಸಮಯಗಳ ನಿಯಮವನ್ನು ಮೀರುವದಾದರೆ ಧರ್ಮಭ್ರಷ್ಟನಾಗುವನೆಂದು ಮನುವಚನದ ಅರ್ಥವನ್ನೂ, ಅಭಿಪ್ರಾಯವನ್ನೂ ಬರೆದಿರುವರು.

ಇದರಲ್ಲಿ ಭ್ರಮವಿರುವದು. ಮೂವತ್ತು ವರ್ಷದ ವಯಸ್ಸಿನವನು ಹನ್ನೆರಡು ವರ್ಷದ ಕನ್ಯೆಯನ್ನೂ, ಇಪ್ಪತ್ತನಾಲ್ಕು ವರ್ಷದವನು ಎಂಟು ವರ್ಷದ ಕನ್ಯೆಯನ್ನೂ ವಿವಾಹಮಾಡಿಕೊಳ್ಳಬೇಕೆಂದು ಹೇಳಿದರೆ ಇದರಿಂದ ಮನುವು ಕಾಲನಿರ್ಣಯವನ್ನು ಮಾಡಿದಂತಾಗಲಿಲ್ಲ. ಕೇವಲ ವಯಸ್ಸಿನ ಹೆಸರನ್ನೆತ್ತಿ ಯೋಗ್ಯಕಾಲವನ್ನು ತೋರಿಸಿರುವನು. ನಿಯಮವನ್ನು ಮೀರಿದರೆ ಧರ್ಮ ಭ್ರಷ್ಟನಾಗುವನೆಂದೂ ಹೇಳಿದಂತಾಗಲಿಲ್ಲ ಮೂವತ್ತು ವರ್ಷದವನಿಗೆ ಹನ್ನೆರಡುವರ್ಷದ ಕನ್ಯೆಯು ವಿವಾಹಕ್ಕೆ ತಕ್ಕವಳು. ಇಪ್ಪತ್ತನಾಲ್ಕು ವರ್ಷದವನಿಗೆ ಎಂಟು ವರ್ಷದ ಕನ್ಯೆಯು ತಕ್ಕವಳು. ಇಂತಹ ಯೋಗ್ಯ ವಿವಾಹದಲ್ಲಿ “ಧರ್ಮೇಸೀದತಿಸತ್ವರಃ” ಗೃಹಸ್ಥ ಧರ್ಮದಗತಿಯು ಶೀಘ್ರವಾಗುವದು, ಎಂದು ಅರ್ಥ

ವಲ್ಲದೆ ಈ ಸಮಯವನ್ನು ವಿಾರಿದರೆ ಧರ್ಮಕ್ಕೆ ಹಾನಿಯುಂಟಾಗುವದೆಂದರ್ಥವಲ್ಲ. ವರನ ವಯಸ್ಸು ಸ್ವಲ್ಪ ಹೆಚ್ಚಾಗಿದ್ದರೆ ವರನ ಕುಟುಂಬದವರು ಹೆಚ್ಚು ವಯಸ್ಸಿನ ಕನ್ಯೆಯನ್ನು ಹುಡುಕುವದನ್ನೂ, ಚಿಕ್ಕವಯಸ್ಸಿನ ಕನ್ಯೆಯಾದರೆ ವರನಿಗೆ ಸರಿಯಲ್ಲ ವೆಂದು ತಿಳಿಯುವದನ್ನೂ, ಹೆಚ್ಚು ವಯಸ್ಸಿನ ವರನಿಗೆ ಹೆಚ್ಚು ವಯಸ್ಸಿನ ಕನ್ಯೆ ಯನ್ನೇ ಆರಿಸುವದನ್ನೂ ನಾವು ನೋಡುತ್ತಲೇ ಇದೇವೆ. ವರಕನ್ಯೆಯರು ಶೀಘ್ರ ವಾಗಿ ಸಂಸಾರಕಾರ್ಯದಲ್ಲಿ ಪ್ರವೃತ್ತರಾಗಬೇಕೆಂಬುವದೇ ಇದರ ಮುಖ್ಯ ಪ್ರಯೋಜನವಾಗಿರುವದು ಇದೇ ಮನುವಿನ ಅಭಿಪ್ರಾಯವು ಇದು ನಮ್ಮ ಕಲ್ಪನೆಯಲ್ಲ. ಕುಲ್ಲೂಕಭಟ್ಟರೇ ಈ ಅರ್ಥವನ್ನು ಬರೆದಿರುವರು.

"ತ್ರಿಂಶದ್ವರ್ಷಃಪುಮಾನ್ ದ್ವಾದಶವರ್ಷವಯಸ್ಕಾಂ ಕನ್ಯಾಮುದ್ವಹೇತ್, ಚತುರ್ವಿಂಶತಿ ವರ್ಷೋವಾಷ್ಟವರ್ಷಾಂ, ಗಾರ್ಹಸ್ಥ್ಯಧರ್ಮೆ ಅವಸಾದಂಗಚ್ಛತಿತ್ವರಾವಾನ್, ಏತಚ್ಚಯೋಗ್ಯಕಾಲಪ್ರದರ್ಶನಪರಂ ನತುನಿಯಮಾರ್ಥಂ, ಪ್ರಾಯೇಣೈತಾವತಃಕಾಲೇನ ಗೃಹೀತವೇದೋಭವತಿ, ತ್ರಿಭಾಗವಯಸ್ಕಾಚಕನ್ಯಾ ವೋಢುರ್ಯೂನೋಯೋಗ್ಯೇತಿ, ಗೃಹೀತ ವೇದಶ್ಚೋಪಕುರ್ವಾಣಕೋ ಗೃಹಸ್ಥಾಶ್ರಮಂಪ್ರತಿನವಿಲಂಬೇತೇತಿಸತ್ವರಇತ್ಯಸ್ಯಾರ್ಥಃ"

ಈ ಮನುವಚನವು ವಿವಾಹಸಮಯವನ್ನು ನಿಯಮಿಸುವದಿಲ್ಲ. ಎಷ್ಟು ವಯಸ್ಸಿನ ವರನಿಗೆ ಎಷ್ಟು ವಯಸ್ಸಿನ ಕನ್ಯೆಯು ತಕ್ಕವಳೆಂಬುದನ್ನು ತೋರಿಸುವದಲ್ಲದೆ ಇಂತಹ ವರನಿಗೆ ತಕ್ಕ ಕನ್ಯೆಯೊಡನೆ ವಿವಾಹವಾದರೆ ಅವರಿಬ್ಬರೂ ಶೀಘ್ರವಾಗಿಯೇ ಗೃಹಸ್ಥಧರ್ಮದಲ್ಲಿ ಪ್ರವಿಷ್ಟರಾಗಬಲ್ಲರೆಂಬುವದೇ ತಾತ್ಪರ್ಯವೆಂದು ಕುಲ್ಲೂಕಭಟ್ಟರು ಸ್ಪಷ್ಟವಾಗಿ ಹೇಳಿರುವರು. ಇದರಲ್ಲಿ ಮನುವು ವಿವಾಹಸಮಯವನ್ನು ಗೊತ್ತುಮಾಡಲಿಲ್ಲ. ಆದುದರಿಂದ ನಿಯಮಭಂಗದ ಪಾಪವನ್ನು ತೋರಿಸಿ ಇಲ್ಲ. ವಿದ್ಯಾಸಾಗರರು ವೃಥಾ ಕಲ್ಪನೆಯನ್ನುಮಾಡಿ ಶಾಸ್ತ್ರಗಳಲ್ಲಿ ವಿರೋಧವನ್ನು ಕಾಣಿಸಿರುವರು

ಕನ್ಯೆಯ ವಿವಾಹಸಮಯದ ವಿಷಯದಲ್ಲಿ ನಾವು ಯಾವ ಧರ್ಮಶಾಸ್ತ್ರವನ್ನು ಅನುಸರಿಸಿ ನಡೆಯುತ್ತೇವೆ? ಈ ವಿಷಯದಲ್ಲಿ ಮನು, ಕಾತ್ಯಾಯನ, ಪರಾಶರ ಇವರುಗಳ ಸಮ್ಮತಿಗಳು ಹೇಗೆಹೇಗೆ ಇವೆ? ಎಂಬುದನ್ನು ವಿಚಾರಮಾಡಿ ನೋಡಬೇಕಾಗಿದೆ.

ಮನುವು ಕನ್ಯಾದಾನಕ್ಕೆ ಕಾಲನಿಯಮವಾವುದನ್ನೂ ಮಾಡಿಲ್ಲ.

" ವೃಷಲೀಃಫೇನಪೀತಸ್ಯ ನಿಶ್ವಾಸೋಪಹತಸ್ಯಚ |
ತಸ್ಯಾಂ ಚೈವಪ್ರಸೂತಸ್ಯನಿಷ್ಕೃತಿರ್ನವಿಧೀಯತೇ ||"

ರಜಸ್ವಲೆಯಾಗಲು ಸಿದ್ಧಳಾದವಳನ್ನು ಮದುವೆಯಾಗಿ ಅವಳ ಅಧರಪಾನವನ್ನು ಮಾಡಿದರೆ, ಅಥವಾ ಅವಳೊಂದಿಗೆ ಮಲಗಿದರೆ, ಅಥವಾ ಅವಳ ಗರ್ಭದಲ್ಲಿ ಸಂತಾನೋತ್ಪಾದನವಮಾಡಿದರೆ ಆ ಪಾಪಕ್ಕೆ ಪ್ರಾಯಶ್ಚಿತ್ತವೇ ಇರುವದಿಲ್ಲವೆಂದು ಮನು ಸ್ಮೃತಿಯಲ್ಲಿ ಹೇಳಿರುವದು. ಇದರಿಂದ ಕನ್ಯಾದಾನಕ್ಕೆ ಮೊದಲು ಆವ ಕನ್ಯೆಯು ರಜಸ್ವಲೆಯಾಗಿರುವಳೋ ಅವಳು ವಿವಾಹಕ್ಕೆ ಯೋಗ್ಯಳಲ್ಲವೆಂದು ನಿಶ್ಚಿತವಾಗುವದು ತಿಳಿಯದೆ ಅಂತಹ ಕನ್ಯೆಯನ್ನು ಮದುವೆಯಾದರೆ ಅವಳಲ್ಲಿ ಸ್ತ್ರೀಭಾವದ ವ್ಯವಹಾರವನ್ನು ಮಾಡಬಾರದು. ಆದುದರಿಂದ ರಜಸ್ವಲೆಯಾಗುವದರ ಪೂರ್ವದಲ್ಲಿಯೇ ಕನ್ಯೆಗೆ ವಿವಾಹವನ್ನು ಮಾಡಿಬಿಡಬೇಕು ಇದರಲ್ಲಿ ವಯಸ್ಸಿನ ನಿಯಮವೇನೂ ಹೇಳಿ ಇಲ್ಲ. ಆವ ವಯಸ್ಸಿನವಳಾದರೂ ರಜಸ್ವಲೆಯಾಗಿದ್ದರೆ ಅಂತಹ ಕನ್ಯೆಯು ಮನುವಿನ ದೃಷ್ಟಿಯಲ್ಲಿ ವಿವಾಹಕ್ಕೆ ಅರ್ಹಳಲ್ಲ. ಆವ ಸಮಯದಲ್ಲಿ ಕನ್ಯೆಯು ರಜಸ್ವಲೆಯಾಗುವಳು ? ಎಂಬುವದನ್ನು ನಿರ್ಣಯಮಾಡಬೇಕಾದುದು ಬಹಳ ಆವಶ್ಯಕವು. ಅಂಗಿರಃ ಋಷಿಗಳು—

" ಅಷ್ಟವರ್ಷಾಭವೇದ್ಗೌರೀ ನವವರ್ಷಾತುರೋಹಿಣೀ |
ದಶಮೆಕನ್ಯಕಾಪ್ರೋಕ್ತಾ ಅತಊರ್ಧ್ವಂರಜಸ್ವಲಾ ||
ತಸ್ಮಾತ್ಸಂವತ್ಸರೆಪ್ರಾಪ್ತದಶಮೆ ಕನ್ಯಕಾಬುಧೈಃ |
ಪ್ರದಾತವ್ಯಾಪ್ರಯತ್ನೇನ ನದೋಷಃ ಕಾಲದೋಷತಃ ||"

ಎಂಟು ವರ್ಷದ ಕನ್ಯೆಯು ಗೌರಿ ಎಂತಲೂ, ಒಂಭತ್ತು ವರ್ಷದವಳು ರೋಹಿಣಿ ಎಂತಲೂ, ಹತ್ತುವರ್ಷದವಳು ಕನ್ಯೆ ಎಂತಲೂ ವ್ಯವಹರಿಸಲ್ಪಡುವಳು. ಇದಕ್ಕೆ ಹೆಚ್ಚಿನ ವಯಸ್ಸಿನವಳು ರಜಸ್ವಲೆ ಎನಿಸುವಳು ಆದುದರಿಂದ ಕನ್ಯೆಯು ಹತ್ತುವಯಸ್ಸಿನವಳಾದರೆ ವಿವೇಕಿಯಾದವನು ವಿವಾಹಮಾಡಿಬಿಡಬೇಕು. ಆಗ ಕಾಲದೋಷವಿಲ್ಲ ಇದರಿಂದ ಕನ್ಯೆಗೆ ಹತ್ತುವರ್ಷ ವಯಸ್ಸಾದ ಒಡನೆಯೇ ಕನ್ಯೆಯು ರಜಸ್ವಲೆಯಾಗುವ ಸಂಭವವುಂಟೆಂದು ತಿಳಿದುಬರುತ್ತದೆ. ಆದುದರಿಂದ ಹತ್ತುವರ್ಷವಾದ ಒಡನೆಯೇ ಕನ್ಯೆಗೆ ವಿವಾಹಮಾಡಿಬಿಡುವ ಪ್ರಯತ್ನವನ್ನು ಮಾಡಬೇಕು.

ಪಾಠಕರು ಮತ್ತೊಂದು ವಿಷಯವನ್ನು ಇಲ್ಲಿ ಜ್ಞಾಪಕದಲ್ಲಿಡಬೇಕು. ಕನ್ಯೆಯ ವಯಸ್ಸನ್ನು ನೋಡಿ ವಿವಾಹಕ್ಕೆ ಯೋಗ್ಯಳೆ ? ಅಲ್ಲವೇ ? ಎಂಬುವ

ದನ್ನು ನಿಶ್ಚಯಮಾಡಬಾರದು. ರಜಸ್ವಲೆಯಾಗುವದಕ್ಕೆ ಮೊದಲು ಕನ್ಯೆಗೆ ವಿವಾಹಬೇಕೆಂಬುವದು ಮುಖ್ಯವಾದುದು. ಆವ ಕನ್ಯೆಗಾದರೂ ಹತ್ತು ವರ್ಷ ವಯಸ್ಸಾಗುವದಕ್ಕಿಂತ ಪೂರ್ವವೇ ರಜೋದರ್ಶನವಾಗುವದಾದರೂ ಆ ಕನ್ಯೆಯು ವಿವಾಹಕ್ಕೆ ಯೋಗ್ಯಳಾಗುವದಿಲ್ಲ. ರಜೋದರ್ಶನವಾಗದಿದ್ದರೆ ಹನ್ನೆರಡು ವರ್ಷದವಳಾದರೂ ವಿವಾಹಕ್ಕೆ ಅರ್ಹಳಾಗುವಳು. ಉದ್ವಾಹತತ್ವದಲ್ಲಿ:—

ತ್ರಿಂಶದ್ವರ್ಷ ಷೋಡಶವರ್ಷಾಂಭಾರ್ಯಾಂ ವಿಂದೇತನಗ್ನಿಕಾಂ |
ಅತೋಪ್ರವೃತ್ತೇ ರಜಸಿ ಕನ್ಯಾಂದದ್ಯಾತ್ಪಿತಾಸಕೃತ್ ||
ಮಹಾದೋಷಃಸ್ಪೃಶೇದೇನಮನ್ಯಥೈವ ವಿಧಿಸ್ಸತಾಂ ||

ಮೂವತ್ತು ವರ್ಷ ವಯಸ್ಕನಾದ ಪುರುಷನು ರಜಸ್ವಲೆಯಾಗದೆ ಇರುವ ಹದಿನಾರು ವರ್ಷ ವಯಸ್ಸಿನ ಕನ್ಯೆಯನ್ನು ಮದುವೆಮಾಡಿಕೊಳ್ಳಬೇಕು ಆದುದರಿಂದ ಕನ್ಯೆಯ ತಂದೆಯು ಋತುಮತಿಯಾಗುವದಕ್ಕೆ ಮೊದಲೇ ಕನ್ಯೆಗೆ ವಿವಾಹವನ್ನು ಮಾಡಬೇಕು. ಇದಕ್ಕೆ ವಿಪರೀತವಾಗಿ ಆಚರಿಸಿದರೆ ಮಹಾ ದೋಷ ಉಂಟಾಗುವದು, ಎಂದು ಮಹಾಭಾರತದ ವ್ಯಾಸ ವಚನವನ್ನು ಬರೆದಿರುವರು ಮಹಾತ್ಮರು ಈ ವಿಧಿಯನ್ನೇ ಹೇಳಿರುವರು. ಆದರೆ ರಜಸ್ವಲೆಯಾಗಿಬಿಟ್ಟಾಳೆಂಬ ಸಂದೇಹದಿಂದ ಹತ್ತು ವರ್ಷ ವಯಸ್ಸಾಗುವದಕ್ಕಿಂತ ಪೂರ್ವದಲ್ಲಿಯೇ ಅಪಾತ್ರನಿಗೆ ಕನ್ಯೆಯನ್ನು ಕೊಟ್ಟುಬಿಡಬಾರದು. ನಿಯಮಿತ ಸಮಯದ ಒಳಗೆ ಯೋಗ್ಯನಾದ ವರನಿಗೆ ಕನ್ಯೆಯನ್ನು ದಾನಮಾಡುವ ಯತ್ನವನ್ನು ಸರ್ವರೂ ಮಾಡಬೇಕು. ಒಂದುವೇಳೆ ಪ್ರಯತ್ನಪಟ್ಟಾಗ್ಯೂ ಯೋಗ್ಯನಾದ ವರನು ದೊರೆಯದಿದ್ದರೆ ಯೋಗ್ಯವರನಿಗಾಗಿ ನಿರೀಕ್ಷಿಸಬೇಕು. ಇದರಿಂದ ಹತ್ತು ವರ್ಷಕ್ಕಿಂತ ಹೆಚ್ಚು ವಯಸ್ಸಾದರೆ ಅಥವಾ ಕನ್ಯೆಯು ಋತುಮತಿಯಾಗುವ ಸಂಭವವು ಬಂದರೆ ಅದೂ ದೋಷವಲ್ಲ. ಇಂತಹ ಸಂದರ್ಭದಲ್ಲಿ ಹತ್ತು ವರ್ಷ ವಯಸ್ಸಿಗಿಂತ ಹೆಚ್ಚು ವಯಸ್ಸಿನ ಕನ್ಯೆಯನ್ನೂ, ಋತುಮತಿಯಾದ ಕನ್ಯೆಯನ್ನೂ ಸಹ ಮದುವೆಯಾಗಬಹುದು. ಹೀಗೆ ಮಾಡುವದರಲ್ಲಿ ಹಿಂದೆ ಹೇಳಿದ "ವೃಷಲೀಫೇನಪೀತಸ್ಯಾ" ಎಂಬ ಮನುವಚನದಲ್ಲಿ ತೋರಿಸಿದ ದೋಷವು ಬರುವುದಿಲ್ಲ.

"ಕಾಮಮಾ ಮರಣಾತ್ತಿಷ್ಠೇತ್ ಗೃಹೆ ಕನ್ಯರ್ತುಮತ್ಯಪಿ |
ನಚೈವೈನಾಂ ಪ್ರಯಚ್ಛೇತ್ತು ಗುಣಹೀನಾಯಕರ್ಹಿಚಿತ್ ||
ತ್ರೀಣಿವರ್ಷಾಣ್ಯುದೀಕ್ಷೇತ ಕುಮಾರ್ಯೃತುಮತೀಸತೀ |
ಊರ್ಧ್ವಂತುಕಾಲಾದೇತಸ್ಮಾದ್ವಿಂದೇತ ಸದೃಶಂಪತಿಂ ||

ಋತುಮತಿಯಾಗಿ ಮರಣಪರ್ಯಂತ ತಂದೆಯ ಮನೆಯಲ್ಲಿಯೇ ಇದ್ದರೂ ಬಾಧಕವಿಲ್ಲ. ಗುಣಹೀನನಾದ ವರನಿಗೆ ಮಾತ್ರ ಕನ್ಯೆಯನ್ನು ಕೊಡಬಾರದು. ಕುಮಾರಿಯು ಋತುಮತಿಯಾದರೂ ಮೂರು ವರ್ಷಗಳವರೆಗೆ ನಿರೀಕ್ಷಿಸಬೇಕು. ಅದರ ಮೇಲೆ ತನಗೆ ಸದೃಶವಾದ ಪತಿಯನ್ನು ವರಿಸಬಹುದು, ಎಂದು ಮನುಸ್ಮೃತಿಯಲ್ಲಿ ಹೇಳಿರುವುದು. ಆದರೆ—ಪರಾಶರ ಸ್ಮೃತಿಯಲ್ಲಿ-

" ಅಷ್ಟವರ್ಷಾಭವೇದ್ಗೌರೀ ನವವರ್ಷಾತು ರೋಹಿಣೀ |
ದಶವರ್ಷಾಭವೇತ್ಕನ್ಯಾತತ ಊರ್ಧ್ವಂ ರಜಸ್ವಲಾ ||
ಪ್ರಾಪ್ತೇತುದ್ವಾದಶೆ ವರ್ಷೇ ಯಃಕನ್ಯಾಂನಪ್ರಯಚ್ಛತಿ |
ಮಾಸಿಮಾಸಿ ರಜಸ್ತಸ್ಯಾಃ ಪಿಬನ್ತಿಪಿತರಸ್ಸ್ವಯಂ ||
ಮಾತಾಚೈವ ಪಿತಾಚೈವ ಜ್ಯೇಷ್ಠೋ ಭ್ರಾತಾ ತಥೈವಚ |
ತ್ರಯಸ್ತೆನರಕಂಯಾನ್ತಿ ದೃಷ್ಟ್ವಾಕನ್ಯಾಂ ರಜಸ್ವಲಾಂ ||
ಯಸ್ತಾಂ ಸಮುದ್ವಹೇತ್ಕನ್ಯಾಂ ಬ್ರಾಹ್ಮಣೋಜ್ಞಾನಮೋಹಿತಃ |
ಅಸಂಭಾಷ್ಯೋಹ್ಯಪಾಂಕ್ತೇಯಸ್ಸವಿಪ್ರೋ ವೃಷಲೀಪತಿಃ ||

ಎಂಟುವರ್ಷದ ಕನ್ಯೆಗೆ ಗೌರಿ ಎಂತಲೂ ಒಂಭತ್ತು ವರ್ಷದವಳಿಗೆ ರೋಹಿಣಿ ಎಂತಲೂ ಹತ್ತು ವರ್ಷದವಳಿಗೆ ಕನ್ಯೆ ಎಂತಲೂ ಹೆಸರು. ಹತ್ತು ವರ್ಷದಮೇಲೆ ರಜಸ್ವಲೆಯಾಗುವಳು. ಕನ್ಯೆಗೆ ಹನ್ನೆರಡು ವರ್ಷ ವಯಸ್ಸಾದರೂ ಮದುವೆಯನ್ನು ಮಾಡದೆ ಇದ್ದರೆ ಮಹಾದೋಷವು ಬರುವುದು ಮದುವೆಯಾಗದೆ ಇರುವಾಗ ರಜಸ್ವಲೆಯಾದ ಮಗಳನ್ನು ಕಂಡರೆ ತಂದೆಯೂ ತಾಯಿಯೂ ಅಣ್ಣನೂ ನರಕವನ್ನು ಹೊಂದುವರು. ಮತ್ತು ತಿಳಿಯದೆ ಅಂತಹ ಕನ್ಯೆಯನ್ನು ಮದುವೆಯಾದವನು ವೃಷಲೀಪತಿ ಎನ್ನಿಸಿಕೊಳ್ಳುವನು. ಅವನು ಸಂಭಾಷಣಕ್ಕೂ ಪಂಕ್ತಿಗೂ ಯೋಗ್ಯನಲ್ಲ, ಎಂದು ಹೇಳಿರುವದು.

ಪರಾಶರರು ವಿಶೇಷ ವಿಧಿಯನ್ನು ಹೇಳಿದೆ. ಸಾಮಾನ್ಯವಾಗಿ ಹತ್ತು ವರ್ಷದ ಒಳಗೆ ಕನ್ಯೆಗೆ ವಿವಾಹವನ್ನು ಮಾಡಬೇಕು; ಅತಿ ಹೆಚ್ಚು ಅಂದರೆ ಹನ್ನೆರಡು ವರ್ಷಗಳವರೆಗೆ ಕನ್ಯೆಯನ್ನು ವಿವಾಹವಿಲ್ಲದೆ ಇಟ್ಟುಕೊಳ್ಳಬಹುದು. ಆವ ಕಾರಣದಿಂದಲಾದರೂ ಹನ್ನೆರಡು ವರ್ಷಗಳು ಕಳೆದಮೇಲೆಯೂ ಕನ್ಯೆಯು ವಿವಾಹವಿಲ್ಲದೆ ನಿಂತರೆ ಅಂತಹ ಕನ್ಯೆಯನ್ನು ಯಾರೂ ವಿವಾಹ ಮಾಡಿಕೊಳ್ಳಬಾರದು. ಮಾಡಿಕೊಂಡಪಕ್ಷದಲ್ಲಿ ಅವನು ವೃಷಲೀಪತಿ ಎನ್ನಿಸಿಕೊಳ್ಳುವನು. ಅವನೊಂದಿಗೆ ಮಾತನ್ನೂ ಆಡಬಾರದು. ಅವನೊಂದಿಗೆ ಭೋಜನವನ್ನೂ ಮಾಡಬಾರದು.

ಆ ಕನ್ಯೆಯ ತಾಯಿ ತಂದೆ ಮೊದಲಾದವರು ಪಾಪಭಾಜನರಾಗುವರು, ಎಂದು ವ್ಯವಸ್ಥೆ ಮಾಡಿರುವರು.

ವಿದ್ಯಾಸಾಗರರ ಕಥನವನ್ನೇ ನಾವು ಒಪ್ಪಿಕೊಳ್ಳುವುದಾದರೆ, ಅಂದರೆ ಇತರ ಶಾಸ್ತ್ರಗಳಿಗೆ ವಿರುದ್ಧವಾಗಿದ್ದರೂ ಪರಾಶರ ಸ್ಮೃತಿಯನ್ನೇ ಕಲಿಯುಗಕ್ಕೆ ಪ್ರಧಾನಶಾಸ್ತ್ರವೆಂದೂ ಅವರ ವ್ಯವಸ್ಥೆಯನ್ನೇ ಆಚರಿಸಬೇಕೆಂದೂ ತಿಳಿದುಕೊಂಡು ಇತರ ಶಾಸ್ತ್ರಗಳೊಂದಿಗೆ ಸಮನ್ವಯ ಮಾಡಿಕೊಳ್ಳದೆ ಇದರಂತೆಯೇ ಆಚರಿಸಬೇಕೆಂದು ಸಿದ್ಧಾಂತ ಮಾಡಿದರೆ ಯೋಗ್ಯನಾದ ವರನು ದೊರೆಯಲಿ, ದೊರೆಯದಿರಲಿ, ಹನ್ನೆರಡು ವರ್ಷಕ್ಕೆ ಮೇಲ್ಪಟ್ಟ ಕನ್ಯೆಯನ್ನು ವಿವಾಹ ಮಾಡದೆ ಇಟ್ಟುಕೊಂಡರೆ ತಾಯಿ, ತಂದೆ, ಅಣ್ಣ, ಇವರುಗಳು ನರಕಗಾಮಿಗಳಾಗುವರು. ಅಲ್ಲದೆ ಅಂತಹ ಕನ್ಯೆಯನ್ನು ವಿವಾಹ ಮಾಡಿಕೊಂಡವನು ಪತಿತನಾಗುವನು. ಆದರೆ ಇದು ಮನುವಚನಕ್ಕೆ ಸರಿಹೋಗುವುದಿಲ್ಲ. ಯೋಗ್ಯನಾದ ವರನು ದೊರಕದಿದ್ದರೆ ಅಥವಾ ಅಂತವನನ್ನು ಹುಡುಕುವ ಪ್ರಯತ್ನವನ್ನೂ ಮಾಡದೆ ಇದ್ದರೆ ಅಂತಹ ಸಂದರ್ಭದಲ್ಲಿ ಕನ್ಯೆಯು ಋತುಮತಿಯಾದರೆ ಅಂತಹ ಕನ್ಯೆಯನ್ನು ಯಾರೂ ಮದುವೆಯಾಗಕೂಡದು. ಹಾಗಿಲ್ಲದೆ ಯತ್ನಮಾಡಿದರೂ ಸುಪಾತ್ರನು ಲಭಿಸದಿದ್ದರೆ ಋತುಮತಿಯಾದರೂ ಅವಿವಾಹಿತಳನ್ನಾಗಿ ಇಟ್ಟುಕೊಳ್ಳಬಹುದು. ಅಯೋಗ್ಯನಿಗೆ ಕೊಡಬಾರದು. ಸುಪಾತ್ರನನ್ನು ಹುಡುಕುವ ಸಂದರ್ಭದಲ್ಲಿ ಕನ್ಯೆಯು ಋತುಮತಿಯಾದರೂ ಮೂರು ವರ್ಷಗಳವರಿಗೆ ನಿರೀಕ್ಷಿಸಬಹುದು ಆದರೂ ಅಧಿಕ ಗುಣಶಾಲಿಯು ದೊರೆಯದೆಹೋದರೆ ಕನ್ಯೆಗೆ ಸಮಾನವಾದ ಗುಣವುಳ್ಳ ವರನಿಗೆ ಕೊಟ್ಟುಬಿಡಬೇಕು. ಗುಣಹೀನನಾದ ವರನಿಗೆ ಎಂದಿಗೂ ಕೊಡಬಾರದು-ಎಂದು ಮನುವಚನವಿರುವುದು.

ಈಗ ನಾವು ಯಾವ ಸ್ಮೃತಿಯಂತೆ ನಡೆಯುತಲಿದೇವೆ ಎಂಬುದನ್ನು ವಿಚಾರ ಮಾಡಬೇಕು. ಕುಲೀನನಾದ ಯೋಗ್ಯವರನು ದೊರೆಯದೆ ಇದ್ದರೆ ಎಷ್ಟು ವಯಸ್ಸು ಹೆಚ್ಚಿದರೂ ಕನ್ಯೆಗೆ ಮದುವೆ ಮಾಡುವುದಕ್ಕೆ ನಾವು ಇಷ್ಟಪಡುವುದಿಲ್ಲ. ಆದರೆ ಪರಾಶರಮತಾನುಸಾರವಾಗಿ ಹೀಗೆ ವಿವಾಹ ಮಾಡುವುದಾದರೆ ಸರ್ವರೂ ನರಕಭಾಜನರಾಗುವರು. ಪರಾಶರರ ವ್ಯವಸ್ಥಾನುಸಾರವಾಗಿ ಪತಿತರೂ ಪಂಕ್ತಿಬಾಹಿರರೂ ಆಗತಕ್ಕವರೇ ಈಗ ನಮ್ಮಲ್ಲಿ ಪ್ರಮುಖರಾಗಿರುವರು. ಅವರಿಲ್ಲದಿದ್ದರೆ ಸಭೆಗಳಿಗೆ ಅಲಂಕಾರವೇ ಇಲ್ಲ. ನಾವು ಪರಾಶರಸ್ಮೃತಿಗೆ ಅನುಸಾರವಾಗಿ ನಡೆಯುತ್ತೇವೆಯೇ ಅಥವಾ ಮನುಸ್ಮೃತಿಗೆ ಅನುಸಾರವಾಗಿ ನಡೆಯುತ್ತೇವೆಯೇ

ಎಂಬುವದು ಇದರಿಂದಲೇ ವ್ಯಕ್ತವಾಗುವುದು. ಆದುದರಿಂದ ಮನುವಿನ ಮುಂದೆ ಪರಾಶರವಚನಕ್ಕೆ ಮಾನ್ಯತೆಯನ್ನುಂಟುಮಾಡುವ ವಿದ್ಯಾಸಾಗರರ ಶ್ರಮವು ವ್ಯರ್ಥವೇಸರಿ. ಮನುಧರ್ಮಶಾಸ್ತ್ರವು ಪರಾಶರ ಮೊದಲಾದ ಯಾವ ಸ್ಮೃತಿ ವಿರುದ್ಧವಾಗಿದ್ದರೂ ಈ ಕಲಿಯುಗದಲ್ಲಿ ಆದರಕ್ಕೆ ಪಾತ್ರವಾಗಿರುವದೆಂಬುವಿಷದಲ್ಲಿ ಆವ ಸಂದೇಹವೂ ಇಲ್ಲ.

ಏಕಏವೌರಸಃ ಪುತ್ರಃ ಪಿತ್ರ್ಯಸ್ಯ ವಸುನಃಪ್ರಭುಃ ।
ಶೇಷಾಣಾಮಾನೃಶಂಸ್ಯಾರ್ಥಂ ಪ್ರದದ್ಯಾತ್ತು ಪ್ರಜೀವನಂ ॥
ಷಷ್ಠಂತು ಕ್ಷೇತ್ರಜಸ್ಯಾಂಶಂ ಪ್ರದದ್ಯಾತ್ಪೈತೃಕಾದ್ಧನಾತ್ ।
ಔರಸೋವಿಭಜನ್ದಾಯಂ ಪಿತ್ರ್ಯಂ ಪಂಚಮಮೇವವಾ ॥
ಔರಸಕ್ಷೇತ್ರಜೌ ಪುತ್ರೌ ಪಿತೃರಿಕ್ಥಸ್ಯ ಭಾಗಿನೌ ।
ದಶಾಪರೇತು ಕ್ರಮಶೋ ಗೋತ್ರರಿಕ್ಥಾಂಶ ಭಾಗಿನಃ ॥

ವಿದ್ಯಾಸಾಗರರು ಈ ಮನುವಚನವನ್ನು ತೋರಿಸಿ ಔರಸಪುತ್ರನೊಬ್ಬನೇ ತಂದೆಯ ಸರ್ವಧನಕ್ಕೂ ಅಧಿಕಾರಿಯಾಗಿರುವನು. ಅವನು ಕೃಪೆಮಾಡಿ ಉಳಿದ ಪುತ್ರರುಗಳಿಗೆ ಅನ್ನವಸ್ತ್ರಗಳನ್ನು ಕೊಡಬೇಕು, ಆದರೆ ಔರಸಪುತ್ರನು ತಂದೆಯ ಸ್ವತ್ತನ್ನು ವಿಭಾಗಮಾಡುವ ಕಾಲದಲ್ಲಿ ಕ್ಷೇತ್ರಜನಾದ ಭ್ರಾತೃವಿಗೆ ತಂದೆಯ ದ್ರವ್ಯದಲ್ಲಿ ಆರನೇ ಒಂದು ಭಾಗವನ್ನು ಕೊಡಬೇಕು. ಎಂದು ಅರ್ಥಮಾಡಿರುವರು. ಔರಸ ಮತ್ತು ಕ್ಷೇತ್ರಜ ಮೊದಲಾದ ಸಂತಾನಗಳಿದ್ದರೆ ತಂದೆಯ ಸಂಪತ್ತಿಗೆ ಔರಸಪುತ್ರನೇ ಅಧಿಕಾರಿಯಾಗುವನು. ಕ್ಷೇತ್ರಜ ಸಂತಾನವು ಕೇವಲ ಐದನೇ ಅಥವಾ ಆರನೇ ಭಾಗಕ್ಕೆ ಅಧಿಕಾರಿಯು. ದತ್ತಕ ಮೊದಲಾದ ಸಂತಾನವು ಕೇವಲ ಅನ್ನವಸ್ತ್ರಗಳಿಗೆ ಅಧಿಕಾರಿಯಾಗುವುದು. ದತ್ತಕನೇ ಮೊದಲಾದ ದಶವಿಧ ಪುತ್ರರಲ್ಲಿ ಪೂರ್ವಪೂರ್ವದವರು ಇಲ್ಲದಿದ್ದರೆ ಮೇಲೆಮೇಲಿನವರು ಗೋತ್ರಧನವನ್ನು ಪಡೆಯುವ ಅಧಿಕಾರಿಗಳಾಗುವರು, ಎಂದು ವಿಚಾರ ಮಾಡಿರುವರು. ಅದರ ಮೇಲೆ

ಉತ್ಪನ್ನೇತ್ವೌರಸೇ ಪುತ್ರೇತೃತೀಯಾಂಶಹರಾಸ್ಸುತಾಃ ।
ಸವರ್ಣಾ ಅಸವರ್ಣಾಸ್ತು ಗ್ರಾಸಾಚ್ಛಾದನ ಭಾಗಿನಃ ॥

ಎಂದು ಕಾತ್ಯಾಯನ ಮತವನ್ನು ಬರೆದು ಔರಸಪುತ್ರನು ಜನಿಸಿದಮೇಲೆ ಸಜಾತೀಯ ಕ್ಷೆತ್ರಜ, ದತ್ತಕ ಮೊದಲಾದ ಪುತ್ರರು ತಂದೆಯ ದ್ರವ್ಯದಲ್ಲಿ ಮೂರನೇ ಭಾಗವನ್ನು ಪಡೆಯುವರು. ಸಜಾತೀಯರಲ್ಲದಿದ್ದರೆ ಅನ್ನವಸ್ತ್ರಗಳನ್ನು ಮಾತ್ರ

ಪಡೆಯುವವರು, ಎಂದು ಅರ್ಥಮಾಡಿರುವರು. ಇದರಿಂದ ದತ್ತಕನನ್ನು ಮಾಡಿಕೊಂಡಮೇಲೆ ಔರಸ ಮತ್ತು ದತ್ತಕ ಮೊದಲಾದ ಪುತ್ರರಲ್ಲಿ ತಂದೆಯ ದ್ರವ್ಯದ ವಿಭಾಗದ ವಿಷಯದಲ್ಲಿ ಮನುವ್ಯವಸ್ಥೆಗೂ ಕಾತ್ಯಾಯನನ ವ್ಯವಸ್ಥೆಗೂ ಭೇದವಿರುವದೆಂತಲೂ, ನಾವು ಮನುಸ್ಮೃತಿಯ ವ್ಯವಸ್ಥೆಯನ್ನು ಬಿಟ್ಟು ಕಾತ್ಯಾಯನನ ವ್ಯವಸ್ಥೆಯಂತೆ ನಡೆಯುತಲಿದೇವೆ ಎಂತಲೂ ತೋರಿಸಿರುವರು. ವಿದ್ಯಾಸಾಗರರು ತಮ್ಮ ಉದ್ದೇಶಕ್ಕೆ ತಕ್ಕಂತೆ ಮೇಲಿನ ವಚನಗಳಿಗೆ ಅರ್ಥ ಮಾಡಿಕೊಂಡು ವಿಚಾರ ಮಾಡಿರುವರು. ಆದರೆ ಜೀಮೂತವಾಹನನ ದಾಯಭಾಗದಲ್ಲಿ ಈ ವಚನಗಳ ವಿಚಾರವನ್ನು ಮಾಡುವುದರಲ್ಲಿ ಸ್ವಲ್ಪವೂ ವಿರೋಧವನ್ನು ತೋರಿಸಿ ಇರುವುದಿಲ್ಲ. ಅದನ್ನು ಇಲ್ಲಿ ತೋರಿಸುವೆವು. ವಿದ್ಯಾಸಾಗರರ ವ್ಯವಸ್ಥೆಗಿಂತಲೂ ಜೀಮೂತವಾಹನನ ವ್ಯವಸ್ಥೆಯು ಅವಶ್ಯವೂ ಸ್ವೀಕರಿಸತಕ್ಕದ್ದಾಗಿರುವದು. ಈ ಕಾಲದ ಜನಗಳು ತಮ್ಮ ಸಾಧಾರಣ ಬುದ್ಧಿಯಿಂದ ಶಾಸ್ತ್ರೀಯ ಗ್ರಂಥಗಳಲ್ಲಿ ತಂದು ಒಡ್ಡುವ ವಿರೋಧವನ್ನು ದೂರಮಾಡುವದಕ್ಕಾಗಿಯೇ ಜೀಮೂತವಾಹನನು ದಾಯಭಾಗವನ್ನು ಬರೆದಿರುವನು. ಅವನು ತನ್ನ ಗ್ರಂಥದ ಆರಂಭದಲ್ಲಿ

"ಮನ್ವಾದಿವಾಕ್ಯಾನ್ಯವಮೃಶ್ಯಯೇಷಾಂ ಯಸ್ಮಿನ್ ವಿವಾದೋ ಬಹುಧಾ ಬುಧಾನಾಂ | ತೇಷಾಂ ಪ್ರಭೋಧಾಯ ಸದಾಯಭಾಗೋ ನಿರೂಪಣೀಯಃ ಸುಧಿಯಶ್ಶೃಣುಧ್ವಂ ||"

ಮನುವೊದಲಾದ ಸ್ಮೃತಿಕಾರರುಗಳ ವಾಕ್ಯಗಳನ್ನು ಸರಿಯಾದ ರೀತಿಯಲ್ಲಿ ವಿಚಾರಮಾಡದಿರುವ ಕಾರಣದಿಂದ ಪಂಡಿತರುಗಳಲ್ಲಿ ವಿವಾದವು ಹುಟ್ಟುವದು. ಅದನ್ನು ದೂರಮಾಡುವುದಕ್ಕಾಗಿ ನಾನು ದಾಯಭಾಗವನ್ನು ಹೇಳುವೆನು, ಪಂಡಿತರು ಕೇಳಲಿ, ಎಂದು ಹೇಳಿರುವನು.

ಮನು ಕಾತ್ಯಾಯನರುಗಳ ವ್ಯವಸ್ಥೆಯಲ್ಲಿ ವಿದ್ಯಾಸಾಗರರು ತೋರಿಸಿದ ವಿರೋಧವನ್ನು ಜೀಮೂತವಾಹನನು ಪರಿಹರಿಸುವ ವ್ಯವಸ್ಥೆಯನ್ನು ಮಾಡಿರುವ ಕ್ರಮವೇನೆಂದರೆ:—

ದೇವಲಃ:— ಸರ್ವೇಹ್ಯನೌರಸಸ್ಯೈತೇ ಪುತ್ರಾ ದಾಯಹರಾಃ ಸ್ಮೃತಾಃ |
ಔರಸೇ ಪುನರುತ್ಪನ್ನೇ ತೇಷು ಜ್ಯೈಷ್ಠ್ಯಂ ನವಿದ್ಯತೇ ||
ತೇಷಾಂ ಸವರ್ಣಾಯೇ ಪುತ್ರಾಸ್ತೇ ತೃತಿಯಾಂಶಭಾಗಿನಃ |
ಹೀನಾಸ್ತಮುಪಜೀವೇಯುರ್ಗ್ರಾಸಾಚ್ಛಾದನ ಸಂಭೃತಾಃ ||
ಔರಸಾದಯುಷ್ಷಟ್ ನಕೇವಲಂ ಪಿತೃದಾಯಹರಾಃ ಕಿಂತು ಬಂಧೂನಾಮಪಿ

ಸಪಿಂಡಾದೀನಾಂ ದಾಯಹರಾಸಸಪಿಂಡಾನಾಂ || ಔರಸಪುತ್ರಶೂನ್ಯಸ್ಯ ಪಿತುಸ್ಸರ್ವಹರಾಃ ಔರಸೇಸತಿಯೆ ಪಿತೃಸವರ್ಣಾಸ್ತೆ ತೃತೀಯಾಂಶಹರಾಃ ಪುತ್ರಿಕಾಯಾಃಅಪಿ ಔರಸಪುತ್ರಾಚ್ಚೋತ್ತಮವರ್ಣಾಸ್ತೆ ಔರಸಸ್ಯ ಪಂಚಮಂ ಷಷ್ಠಂವಾಂಶಂ ಗುಣವದಗುಣತಯಾಗೃಹ್ಣೀಯುಃ

ಯಥಾಮನುಃ

ಷಷ್ಠಂತುಕ್ಷೇತ್ರಜಸ್ಯಾಂಶಂ ಪ್ರದದ್ಯಾತ್ಪೈತೃಕಾದ್ಧನಾತ್ |
ಔರಸೋವಿಭಜನ್ದಾಯಂ ಪಿತ್ರ್ಯಂಪಂಚಮಮೇವವಾ ||

ದೇವಲವಚನೇನ ಸರ್ವೇಷಾಂ ಕ್ಷೇತ್ರಜತುಲ್ಯತ್ವಾಭಿಧಾನಾಸ್ಮನುವಚನೆ ಕ್ಷೇತ್ರಜಪದಮುಪಲಕ್ಷಣಂ. ಯೇತು ಪಿತುರೌರಸಾಚ್ಚ ಭಾತುಹೀನಸವರ್ಣಾಸ್ತೆ ಗ್ರಾಸಾಚ್ಛಾದನಮಾತ್ರಾಧಿಕಾರಿಣಃ

ತದಾಹಮನುಃ

ಏಕಏವೌರಸಃ ಪುತ್ರಃ ಪಿತ್ರ್ಯಸ್ಯವಸುನಃ ಪ್ರಭುಃ |
ಶೇಷಾಣಾಮಾನೃಶಂಸ್ಯಾರ್ಥಂ ಪ್ರದದ್ಯಾತ್ತುಪ್ರಜೀವನಂ ||

ತಥಾ ಕಾತ್ಯಾಯನಃ

ಉತ್ಪನ್ನೆತ್ವೌರಸೆ ಪುತ್ರೆ ತೃತೀಯಸಾಂಶಭಾಸ್ಮೃತಾಃ |
ಸವರ್ಣಾ ಅಸವರ್ಣಾಸ್ತು ಗ್ರಾಸಾಚ್ಛಾದನಭಾಗಿನಃ ||

ಮನುವಚನೆ ಶೇಷಪದಂ ಕಾತ್ಯಾಯನವಚನೇಚಾಸವರ್ಣಪದಂ ಹೀನವರ್ಣಪರಂ, ದೇವಲೇನೈಕವಾಕ್ಯತ್ವಾತ್

ಔರಸಪುತ್ರನಿಲ್ಲದಿದ್ದರೆ ಪುತ್ರರೆಲ್ಲರೂ ತಂದೆಯ ದ್ರವ್ಯವನ್ನೆಲ್ಲವನ್ನೂ ಪಡೆಯುವರು. ಔರಸಪುತ್ರನು ಜನಿಸಿದಮೇಲೆ ಇತರ ಪುತ್ರರಲ್ಲಿ ಜ್ಯೇಷ್ಠತ್ವವಿರುವುದಿಲ್ಲ. ಔರಸನು ಜನಿಸಿದಮೇಲೆ ಕ್ಷೇತ್ರಜನೇ ಮೊದಲಾದ ಪುತ್ರರು ತಂದೆಯ ಸವರ್ಣರಾಗಿದ್ದರೆ ಔರಸನಿಂದ ಮೂರನೇಭಾಗವನ್ನು ಪಡೆಯುವರು. ಹೀನವರ್ಣದವರಾದರೆ ಅನ್ನವಸ್ತ್ರಗಳನ್ನು ಮಾತ್ರ ಪಡೆಯುವರು. ಪುತ್ರಿಕೆಯೂ ಔರಸನಿಗೆ ಸಮಾನಳಾದುದರಿಂದ ಅವಳೊಂದಿಗೂ ಹೀಗೆಯೇ ವಿಭಾಗವಾಗುವುದು. ಅಂದರೆ ಪುತ್ರಿಕೆಗೂ ಕ್ಷೇತ್ರಜಾದಿಪುತ್ರರಿಗೂ ವಿಭಾಗವಾಗಬೇಕಾದ ಸಂದರ್ಭದಲ್ಲಿ ಪುತ್ರಿಕೆಯಿಂದ ಮೂರನೇ ಒಂದು ಭಾಗವನ್ನು ಕ್ಷೇತ್ರಜಾದಿಗಳು ಪಡೆಯುವರು. ಮತ್ತು ತಂದೆಗಿಂತಲೂ ಹೀನವರ್ಣದವರಾಗಿ ಔರಸನಿಗಿಂತಲೂ ಉತ್ತಮ ವರ್ಣದವರಾಗಿದ್ದರೆ ಮತ್ತು ಗುಣಶಾಲಿಗಳಾಗಿದ್ದರೆ ಔರಸಪುತ್ರನ ಐದನೇ ಒಂದು ಭಾ

ಗನನ್ನೂ ಗುಣಹೀನರಾಗಿದ್ದರೆ ಆರನೇ ಒಂದು ಭಾಗವನ್ನೂ ಹೊಂದುವರು. ಅಂದರೆ ತಂದೆಗಿಂತಲೂ ಹೀನವರ್ಣದವನಾಗಿಯೂ ಔರಸನಿಗಿಂತಲೂ ಉತ್ತಮ ವರ್ಣದವನಾಗಿಯೂ ಇದ್ದರೆ ಐದನೇ ಒಂದು ಭಾಗವನ್ನೂ ತಂದೆಗಿಂತಲೂ ಹೀನನಾಗಿ ಔರಸನಿಗೆ ಸಮಾನವರ್ಣದವನಾಗಿದ್ದರೆ ಆರನೇ ಒಂದು ಭಾಗವನ್ನೂ ಹೊಂದುವನು. ಮನುಸ್ಮೃತಿಯಲ್ಲಿಯೂ, ಔರಸ ಪುತ್ರನು ತಂದೆಯ ಧನವನ್ನು ವಿಭಾಗ ಮಾಡುವಾಗ ಆ ಧನದಲ್ಲಿ ಕ್ಷೇತ್ರಜ ಮೊದಲಾದ ಪುತ್ರರಿಗೆ ಸಗುಣ ನಿರ್ಗುಣಾದಿ ಭೇದದಿಂದ ಐದನೇ ಅಥವ ಆರನೆ ಭಾಗವನ್ನು ಕೊಡಬೇಕು, ಎಂದು ಹೇಳಿರುವದು.

ದೇವಲರು ಪುತ್ರರೆಲ್ಲರನ್ನೂ ಕ್ಷೇತ್ರಜನಿಗೆ ಸಮನಾಗಿಯೇ ಹೇಳಿರುವರು. ಮನುಸ್ಮೃತಿಯಲ್ಲಿ ಕ್ಷೇತ್ರಜ ಪದವನ್ನು ಉಪಲಕ್ಷಣವೆಂದು ತಿಳಿದುಕೊಳ್ಳಬೇಕು. ಕ್ಷೇತ್ರಜಾದಿ ಪುತ್ರರು ತಂದೆಗಿಂತಲೂ ಮತ್ತು ಔರಸನಿಗಿಂತಲೂ ಹೀನವರ್ಣದವರಾಗಿದ್ದರೆ ಅವರು ಅನ್ನವಸ್ತ್ರಗಳಿಗೆ ಮಾತ್ರ ಭಾಗಿಯಾಗುವರು. ಮನುಸ್ಮೃತಿಯಲ್ಲಿಯೂ, ಔರಸ ಪುತ್ರನೊಬ್ಬನೇ ತಂದೆಯ ಸರ್ವಧನಕ್ಕೂ ಭಾಗಿಯಾಗುವನು. ಉಳಿದವರಿಗೆ ಔರಸನು ದಯವಿಟ್ಟು ಅನ್ನವಸ್ತ್ರಗಳನ್ನು ಕೊಡಬೇಕೆಂದು ಇದೇ ಅಭಿಪ್ರಾಯವು ಹೇಳಲ್ಪಟ್ಟಿದೆ. ಕಾತ್ಯಾಯನರೂ ಸಹ ಔರಸನು ಜನಿಸಿದಮೇಲೆ ಪ್ರತಿನಿಧಿ ಪುತ್ರರು ಸಮಾನ ಜಾತಿಯವರಾಗಿದ್ದರೆ ಮೂರನೆ ಒಂದು ಭಾಗವನ್ನು ಪಡೆಯುವರು. ತಂದೆ ಔರಸ ಇವರಿಬ್ಬರಿಗಿಂತಲೂ ಹೀನ ಜಾತಿಯವರಾದರೆ ಭಾಗಾರ್ಹರಲ್ಲ. ಅನ್ನವಸ್ತ್ರಗಳನ್ನು ಮಾತ್ರ ಪಡೆಯುವರೆಂದು ಹೇಳಿರುವರು. ಹಿಂದೆ ಮನುಸ್ಮೃತಿಯ ಶ್ಲೋಕದಲ್ಲಿರುವ ಶೇಷ ಪದಕ್ಕೂ ಕಾತ್ಯಾಯನ ವಚನದಲ್ಲಿರುವ ಅಸವರ್ಣ ಪದಕ್ಕೂ ಹೀನ ಜಾತಿ ಎಂದರ್ಥವು. ದೇವಲರ ವಚನದಲ್ಲಿ ಹೀಗೆಹೇಳಿರುವುದು. ಅದರೊಂದಿಗೆ ಸಮನ್ವಯ ಮಾಡುವದರಿಂದ ಇದೇ ಅರ್ಥವು ಲಭಿಸುವುದು.

ವಿದ್ಯಾಸಾಗರರು ತಮ್ಮ ಅದ್ಭುತ ಬುದ್ಧಿಯಿಂದ ತೋರಿಸಿದ ದೋಷವನ್ನು ಜೀಮೂತವಾಹನನು ಹೇಗೆ ಪರಿಹರಿಸಿ ಎಷ್ಟು ಸುಂದರವಾದ ವ್ಯವಸ್ಥೆಯನ್ನು ಮಾಡಿರುವನೆಂಬುವದನ್ನು ಪಾಠಕರು ವಿಚಾರಮಾಡಿ ನೋಡಬೇಕು. ವಾಸ್ತವವಾಗಿಯೂ ವಿರೋಧವಿದ್ದರೆ ಈ ವ್ಯವಸ್ಥೆಯು ಹೇಗೆ ಆಗುತ್ತಿತ್ತು? ನಿಷ್ಪಕ್ಷಭಾವದಿಂದ ವಿಚಾರಮಾಡುವ ದೃಷ್ಟಿಯೇ ಬೇರೆ. ಆ ದೃಷ್ಟಿಯಿಂದ ವಿಚಾರಮಾಡುವುದಾದರೆ ವಿರೋಧವೇ ಇರುವುದಿಲ್ಲ.

ಯಸ್ಯಾಮ್ರಿಯೇತ ಕನ್ಯಾಯಾ ವಾಚಾಸತ್ಯೇಕೃತೇ ಪತಿಃ |
ತಾಮನೇನ ವಿಧಾನೇನ ನಿಜೋವಿಂದೇತ ದೇವರಃ ||
ಯಥಾವಿಧ್ಯಧಿಗಮ್ಯೈನಾಂ ಶುಕ್ಲವಸ್ತ್ರಾಂ ಶುಚಿವ್ರತಾಂ |
ಮಿಥೋಭಜೇದಾಪ್ರಸವಾತ್ಸಕೃತ್ಸಕೃದೃತಾವೃತೌ ||
ನದತ್ವಾಕಸ್ಯಚಿತ್ಕನ್ಯಾಂಪುನರ್ದದ್ಯಾದ್ವಿಚಕ್ಷಣಃ |
ದತ್ವಾಪುನಃಪ್ರಯಚ್ಛನ್ಹಿ ಪ್ರಾಪ್ನೋತಿ ಪುರುಷಾನೃತಂ ||

ಸಂಕಲ್ಪಪೂರ್ವಕವಾಗಿ ವಾಗ್ದಾನ ಮಾಡಿದಮೇಲೆ ಪತಿಯು ಮೃತನಾದರೆ ಆ ಕನ್ಯೆಯನ್ನು ಆ ಕನ್ಯೆಯ ಮೈದುನನು ವಿವಾಹ ಮಾಡಿಕೊಳ್ಳಬಹುದು. ಆದರೆ ಅವಳಲ್ಲಿ ಸಂತಾನವಾಗುವವರೆಗೆ ಪ್ರತಿಒಂದು ಋತುಕಾಲದಲ್ಲಿಯೂ ಒಂದೊಂದೇ ಆವೃತ್ತಿ ವಿಧವೆಯ ಲಕ್ಷಣದಿಂದ ಕೂಡಿದ ಆ ಕನ್ಯೆಯೊಂದಿಗೆ ಸೇರಬೇಕು. ವಿವೇಕಿಯಾದ ಪುರುಷನು ಕನ್ಯೆಯನ್ನು ಒಬ್ಬರಿಗೆ ದಾನಮಾಡಿದ ಮೇಲೆ ಮತ್ತೊಬ್ಬರಿಗೆ ಆ ಕನ್ಯೆಯನ್ನು ಪುನಃ ದಾನಮಾಡಕೂಡದು. ಒಬ್ಬನಿಗೆ ಒಂದಾವರ್ತಿ ದಾನ ಮಾಡಿಕೊಟ್ಟು ಪುನಃ ಮತ್ತೊಬ್ಬ ವರನಿಗೆ ಅದೇ ಕನ್ಯೆಯನ್ನು ದಾನಮಾಡಿದರೆ ಹಾಗೆ ದಾನಮಾಡಿದವನು ಮಿಥ್ಯಾವಾದಿ ಎನ್ನಿಸಿಕೊಳ್ಳುವನು ನಿಂದೆಗೆ ಗುರಿಯಾಗುವನು. ಇದು ಮನುಸ್ಮೃತಿ:—

ವಸಿಷ್ಠಸ್ಮೃತಿಯಲ್ಲಿ.

ಅದ್ಭಿರ್ವಾಚಾಚದತ್ತಾಯಾ ಮ್ರಿಯೇತಾಥೋ ವರೋಯದಿ |
ನಚಮಂತ್ರೋಪನೀತಾಸ್ಯಾತ್ಕುಮಾರೀ ಪಿತುರೇವಸಾ ||
ಯಾವಚ್ಚೇದಾಹೃತಾ ಕನ್ಯಾಮಂತ್ರೈರ್ಯದಿನ ಸಂಸ್ಕೃತಾ |
ಅನ್ಯಸ್ಮೈವಿಧಿವದ್ದೇಯಾ ಯಥಾ ಕನ್ಯಾತಥೈವಸಾ ||

ಸಂಕಲ್ಪವನ್ನು ಹೇಳಿ ನೀರೆರೆದು ದಾನಮಾಡಿದಮೇಲೆಯೂ ಮಂತ್ರಮೂಲಕ ಸಂಸ್ಕೃತಳಾಗದಿದ್ದರೆ ಅಂತಹ ಸಮಯದಲ್ಲಿ ವರನು ಮೃತನಾದರೆ ಆ ಕನ್ಯೆಯು ತಂದೆಗೇನೇ ಸೇರಿದವಳಾಗುವಳು. ತಂದೆಯು ಮತ್ತೊಬ್ಬ ವರನಿಗೆ ವಿಧಿಪೂರ್ವಕವಾಗಿ ದಾನಮಾಡಬಹುದು. ಇದರಲ್ಲಿ ಅವಳ ಕನ್ಯಾತ್ವವು ನಷ್ಟವಾಗುವುದಿಲ್ಲ. ಎಂದು ಇರುವುದು. ವಿದ್ಯಾಸಾಗರರು ಇವೆರಡನ್ನು ತೋರಿಸಿ ಮನುವಿನ ಮತದಲ್ಲಿ ವಿವಾಹಕ್ಕೆ ಮೊದಲು ವಾಗ್ದಾನವಾದ ಮೇಲೆ ವರನು ಮೃತನಾದರೆ ಕನ್ಯೆಯು ವಿಧವೆಯಾಗುವಳು. ವಸಿಷ್ಠರ ಮತದಲ್ಲಿ ಕನ್ಯೆಯ ವಿಧವೆಯಾಗುವದಿಲ್ಲ. ತಂದೆಗೆ ಸೇರುವಳು. ಆದರೆ ಮೊದಲು ತಂದೆಗೆ ಅಧಿಕಾರವಿದ್ದಂತೆಯೇ ಈಗಲೂ

ಇರುವದು. ಆದುದರಿಂದ ತಂದೆಯು ತನ್ನ ಇಚ್ಛಾನುಸಾರ ಮತ್ತೊಬ್ಬ ವರನಿಗೆ ವಿಧಿಪೂರ್ವಕವಾಗಿ ದಾನವಾಡಬಹುದು. ಹೀಗೆ ಮನುಮತಕ್ಕೂ ವಸಿಷ್ಠಮತಕ್ಕೂ ವ್ಯತ್ಯಾಸವಿರುವುದು. ಇಂತಹ ಸಂದರ್ಭದಲ್ಲಿ ನಾವು ವಸಿಷ್ಠರ ಮತದಂತೆ ನಡೆಯುತ್ತೇವೆ. ಆದುದರಿಂದ ಕಲಿಯುಗದಲ್ಲಿ ಮನುವಚನವು ಅನಾದರಣೀಯವಾಗಿರುವದು ಎಂದು ಬರೆದಿರುವರು. ಈಗ ವಾಗ್ದತ್ತಳು ಯಾರು? ಮಂತ್ರೋಪನೀತಳು ಯಾರು? ಇದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕಾಗಿದೆ. ವಿದ್ಯಾಸಾಗರರ ಲೇಖನದ ರೀತಿಯಲ್ಲಿ ಇದರ ಅರ್ಥವು ಸರಿಯಾಗಿ ಬೋಧವಾಗುವುದಿಲ್ಲ. ಅಲ್ಲದೆ ವಿವಾಹಪರ್ಯಾಯಕ್ರಮದಿಂದ ಯಾವಯಾವ ಕರ್ಮಗಳು ನಡೆಯುತ್ತವೆ? ಶಾಸ್ತ್ರೋಕ್ತ ರೀತಿಯಿಂದ, ವಾಚಾದತ್ತಾ, ಅದ್ಭಿರ್ದತ್ತಾ, ಕೃತಕೌತುಕ ಮಂಗಲಾ, ಪಾಣಿಗೃಹೀತಿಕಾ, ಅಗ್ನಿಪರಿಗತಾ, ಮೊದಲಾದ ವಾಕ್ಯಗಳೆಲ್ಲವೂ ವಿವಾಹದ ಯಾವಯಾವ ಕಾರ್ಯದ ಉದ್ದೇಶದಿಂದ ಹೇಳಲ್ಪಡುತ್ತವೆ? ಇವುಗಳನ್ನೆಲ್ಲವನ್ನೂ ಸ್ಪಷ್ಟವಾಗಿ ತಿಳಿದುಕೊಳ್ಳಬೇಕಾದುದು ಅವಶ್ಯವಾಗಿರುವುದು. ಇಲ್ಲವಾದರೆ ಶಾಸ್ತ್ರದ ಸರಿಯಾದ ವಿಧಿ ಯಾವುದೆಂಬುವದು ಶಾಸ್ತ್ರದ ಪೂರ್ಣವಾದ ಅನುಭವವಿಲ್ಲದ ಪಾಠಕರಿಗೆ ತಿಳಿಯಲು ಕಷ್ಟವಾಗುವುದು. ಆದುದರಿಂದ ವಿವಾಹದ ರೀತಿಯನ್ನು ಕುರಿತು ಸ್ವಲ್ಪ ಹೇಳುವೆವು.

ಸಂಸ್ಕಾರತತ್ವದಲ್ಲಿ

"ತತ್ರಪೂರ್ವಂ ಯದಿ ವಾಗ್ದಾನಂ ಕ್ರಿಯತೆ ತದಾ ಅದ್ಯೇತ್ಯಾದಿ ಅಮುಕ ಗೋತ್ರಸ್ಯ ಆರೋಗಿಣೊ ಅವ್ಯಂಗಸ್ಯ ಅಪತಿತಸ್ಯ ಅಕ್ಲೀಬಸ್ಯ ಅವಿವಾಹಾಮಮುಕ ಗೋತ್ರಾಮಮುಕೀಂ ದೇವೀಂ ಕನ್ಯಾಂ ದಾತುಂ ತವಾಹಂ ಪ್ರತಿಜಾನೆ, ಇತಿ ಪಿತಾಬ್ರೂಯಾತ್"

ವಿವಾಹಕ್ಕೆ ಮೊದಲು ವಾಗ್ದಾನ ಮಾಡುವದಾಗಿದ್ದರೆ ಕನ್ಯೆಯ ತಂದೆಯು "ಅದ್ಯೇತ್ಯಾದಿ" ಮಂತ್ರವನ್ನು ಹೇಳಿ ನಾನು ಕನ್ಯೆಯನ್ನು ನಿನಗೆ ದಾನ ಮಾಡಿ ಕೊಡುತ್ತೇನೆ ಎಂದು ವರನೆದುರಿನಲ್ಲಿ ಪ್ರತಿಜ್ಞೆಮಾಡಬೇಕು ಎಂದು ಹೇಳಿರುವುದು.

ಇಲ್ಲಿ ವಾಗ್ದಾನ ಮಾಡುವದಾಗಿದ್ದರೆ ಎಂದು ಹೇಳಿರುವುದರಿಂದ ವಾಗ್ದಾನ ಮಾಡಲೇಬೇಕು ಎಂಬ ನಿಯಮವು ಅಷ್ಟು ಅವಶ್ಯಕವಲ್ಲವೆಂದು ತೋರುವದು.

ಇದು ಅವರವರ ಇಚ್ಛೆಯಮೇಲಿರುವುದು. ಇಷ್ಟವಿದ್ದರೆ ವಾಗ್ದಾನ ಮಾಡಬಹುದು. ಇಲ್ಲವಾದರೆ ಮಾಡಬೇಕಾಗಿಲ್ಲ. ಸಾಮವೇದೀಯ ವಿವಾಹಪದ್ಧತಿಯಲ್ಲಿ ವಾಗ್ದಾನವರ್ಣನವಿರುವುದಿಲ್ಲ. ಋಗ್ವೇದೀಯ ಕರ್ಮಪದ್ಧತಿಯನ್ನು ಆ

ಶ್ವಲಾಯನ ಗೃಹ್ಯಸೂತ್ರಾನುಸಾರವಾಗಿ ವಾಸುದೇವರೆಂಬುವರು ಬರೆದಿರುವರು. ಅದರಲ್ಲಿಯೂ ವಾಗ್ದಾನದ ಉಪದೇಶವಿಲ್ಲ. ಯಜುರ್ವೇದದ ಕರ್ಮಪದ್ಧತಿಯೊಳಗೆ ಪುರಾತನವಾದವುಗಳೊಳಗೆ ಪಶುಪತಿಪದ್ಧತಿಯಲ್ಲಿ

" ಅಥ ಯಜುರ್ವೇದಿನಾಂ ದಶಕರ್ಮಪದ್ಧತಿರ್ಲಿಖ್ಯತೆ. ತತ್ರಾದೌ ವಿವಾಹ ಕರ್ಮಾಭಿಧೀಯತೆ ತತಃ ಕತಿಪಯ ದಿವಸ ಭಾವಿನಿ ವಿವಾಹೆ ಸ್ತ್ರ್ಯಚಾರ ಸಿದ್ಧಮ ವಿಘ್ನಕರ್ಮಾದಿಕಂ ಕೃತ್ವಾ ಪೂರ್ವೋಕ್ತಕಾಲೇ ವಿವಾಹ ಲಗ್ನದಿವಸೇ ವಾ ಪ್ರತಿ ನಿರ್ವರ್ತಿತ ನಿತ್ಯಕೃತ್ಯೋ ವರಪಿತಾಚ ಗೌರ್ಯಾದಿ ಷೋಡಶ ಮಾತೃಕಾಪೂಜಾಂ ವೃದ್ಧಿಶ್ರಾದ್ಧಂಚಕುರ್ಯಾತ್. ತತಶ್ಶುಭೆಮುಹೂರ್ತೆ ಹಸ್ತೋದಕಾರ್ಥಂ ಯಥಾ ಸ್ತ್ರ್ಯಚಾರಸಿದ್ಧಂ ಫಲಕುಸುಮಾದಿಕಂ ಗೃಹೀತ್ವಾ ಬ್ರಾಹ್ಮಣಾದಯೋ ಜಾಮಾತೃಗೃಹಂಗಚ್ಛೇಯುಃ, ತತ್ರಗತ್ವಾ ಪಶ್ಚಿಮಾಭಿಮುಖಃ ಕನ್ಯಾಸಂಬಂಧೀ ಬ್ರಾಹ್ಮಣಃ ಪೂರ್ವಾಭಿಮುಖ ವರ ಸಂಬಂಧಿ ಬ್ರಾಹ್ಮಣಾಯ ಸತಿಲಕುಶೋದಕೈರ್ಹಸ್ತೋದಕಂ ದದ್ಯಾತ್. ತತಃ ಓಂ ಅದ್ಯೇತ್ಯಾದಿ ಶುಭೆಲಗ್ನೇ ಅಮುಕಗೋತ್ರಸ್ಯ ಅಮುಕಪ್ರವರಸ್ಯ ಅಮುಕದೇವಶರ್ಮಣಃ ಪ್ರಪೌತ್ರಸ್ಯ ಅಮುಕಗೋತ್ರಸ್ಯ ಅಮುಕಪ್ರವರಸ್ಯ ಅಮುಕದೇವಶರ್ಮಣಃ ಪೌತ್ರಸ್ಯ ಅಮುಕಗೋತ್ರಸ್ಯ ಅಮುಕ ಪ್ರವರಸ್ಯ ಅಮುಕದೇವಶರ್ಮಣಃ ಪುತ್ರಸ್ಯ ಅಮುಕಗೋತ್ರಸ್ಯ ಅಮುಕಪ್ರವರಸ್ಯ ಅಮುಕದೇವಶರ್ಮಣಃ ಪ್ರಪೌತ್ರೀಂ ಅಮುಕಗೋತ್ರಸ್ಯಾಮುಕಪ್ರವರಸ್ಯ ಅಮುಕದೇವಶರ್ಮಣಃ ಪೌತ್ರೀಂ ಅಮುಕಗೋತ್ರಸ್ಯಾಮುಕಪ್ರವರಸ್ಯಾಮುಕ ದೇವಶರ್ಮಣಃ ಪುತ್ರೀಂ ಅಮುಕ ಗೋತ್ರಾಮುಮುಕಪ್ರವರಾಂ ಶ್ರೀಮತೀಂ ಅಮುಕ ದೇವ್ಯಭಿಧಾನಾಂ ಕನ್ಯಾಂ ಶುಭವಿವಾಹೇನ ದಾತುಂತವಾಹಂ ಪ್ರತಿಜಾನೆ ಇತಿ ಜಾಮಾತಾಬಾಢಮಿತಿ ಬ್ರೂಯಾತ್. ತತಶ್ಶುಭೆಲಗ್ನೇ ವರಮರ್ಚಯೇತ್ "

ವಿವಾಹಕ್ಕೆ ಕೆಲವು ದಿನಗಳ ಹಿಂದೆ ಅಥವಾ ವಿವಾಹ ದಿವಸದಲ್ಲಿ ವರಕನ್ಯೆಯರ ತಂದೆಗಳ ಮನೆಗಳಲ್ಲಿ ಗೌರೀ ಮೊದಲಾದ ಷೋಡಶ ಮಾತೃಕಾ ಪೂಜೆಗಳೂ ವೃದ್ಧಿಶ್ರಾದ್ಧವೂ ಆದ ಮೇಲೆ ಕನ್ಯೆಯ ತಂದೆಯು ಸ್ತ್ರೀಯರ ಆಚಾರವನ್ನನುಸರಿಸಿ ಫಲಕುಸುಮಾದಿಗಳನ್ನು ತೆಗೆದುಕೊಂಡು ಕೆಲವು ಬ್ರಾಹ್ಮಣರೊಂದಿಗೆ ಅಳಿಯನ ಮನೆಗೆ ಹೋಗಬೇಕು. ಅಲ್ಲಿ ವರಪಕ್ಷದ ಬ್ರಾಹ್ಮಣರ ಕೈಯಲ್ಲಿ ಫಲಕುಸುಮ ಮೊದಲಾದವುಗಳನ್ನು ಕೊಟ್ಟು ಅಳಿಯನ ಅಜ್ಜನೇ ಮೊದಲಾದವರ ಗೋತ್ರ ಪ್ರವರಗಳನ್ನೂ ಕನ್ಯೆಯ ಅಜ್ಜನೇ ಮೊದಲಾಗಿ ಗೋತ್ರ ಪ್ರವರಗಳನ್ನೂ ಹೇಳಿ ನಾನು ನಿನಗೆ ಕನ್ಯೆಯನ್ನು ಕೊಡುವೆನೆಂದು ಹೇಳಬೇಕು. ಆಗ ವರನು ಸ್ವೀ

ಕಾರ ಮಾಡಬೇಕು. ಈಗ ಪ್ರಾಯಃ ಎಲ್ಲಾ ಕಡೆಗಳಲ್ಲಿಯೂ ವಾಗ್ದಾನವು ನಡೆಯುವುದುಂಟು. ಆದರೆ ಅದು ಶಾಸ್ತ್ರೋಕ್ತವಾದ ರೀತಿಯಲ್ಲಿರುವುದಿಲ್ಲ. ಇದು ವಿವಾಹಕ್ಕೆ ಐದೈದು ವರ್ಷಗಳ ಹಿಂದೆಯೂ ಆಗುವುದು. ಇದನ್ನು ಬಂಧುತ್ವದ ವಾಗ್ದಾನವೆಂದು ಹೇಳುವರು. ಇದರಲ್ಲಿ ಕನ್ಯೆಯ ತಂದೆಯು ವರನ ಮನೆಗೆ ಹೋಗಬೇಕಾಗಿರುವುದಿಲ್ಲ. ಕನ್ಯಾಪಕ್ಷದ ಬ್ರಾಹ್ಮಣರು ವರನಲ್ಲಿ ಹೋಗಿ ಈ ಕೆಲಸವನ್ನು ಮಾಡುವರು. ವೇದದ ಪ್ರಚಾರವು ಕಡಮೆಯಾಗಿರುವುದರಿಂದ ಪ್ರಾಯಃ ಯಜುರ್ವೇದ ಪದ್ಧತಿಯಲ್ಲಿಯೇ ಅನೇಕರು ಕಾರ್ಯನಿರ್ವಾಹವನ್ನು ಮಾಡುವರು. ವಿವಾಹದ ದಿನದಲ್ಲಿಯೂ ಸರ್ವಪ್ರಥಮದಲ್ಲಿ ವರಪೂಜೆಯು ನಡೆಯುವುದು. ಅದರ ಅನಂತರ ಕನ್ಯೆಯ ತಂದೆಯು ಕೈಯಲ್ಲಿ ನೀರನ್ನು ತೆಗೆದುಕೊಂಡು ಕನ್ಯಾದಾನವನ್ನು ಮಾಡುವನು. ಇದಾದ ಮೇಲೆಯೇ ಕನ್ಯೆಯು ಅದ್ಭಿರ್ದತ್ತಾ, ಎನ್ನಿಸಿಕೊಳ್ಳುವಳು. ಅನಂತರದಲ್ಲಿ ಅಗ್ನಿಯನ್ನು ಸ್ಥಾಪಿಸಿ ಸಪ್ತಪದೀಗಮನ ಮತ್ತು ಪ್ರಜಾಪತಿ ಋಷಿ ಸ್ತ್ರಿಷ್ಟುಪ್ಛಂದೋಭಗಾದಯೋ ದೇವತಾ ಗೃಹೀತಕನ್ಯಾಪಾಣೇಃ ಪತ್ಯುರ್ಜಪೇವಿನಿಯೋಗಃ ಇತ್ಯಾದಿ ಮಂತ್ರಗಳನ್ನು ಪಠಿಸಿ ಪಾಣಿಗ್ರಹಣವಾದ ಮೇಲೆ ಕನ್ಯೆಯು ಪಾಣಿಗೃಹೀತಿಕಾ, ಎನ್ನಿಸಿಕೊಳ್ಳುವಳು. ಅನಂತರದಲ್ಲಿ ಲಾಜಹೋಮವಾಗಿ ವಿವಾಹಕಾರ್ಯವು ಪೂರ್ಣವಾಗುವುದು. ವಿವಾಹದ ಪದ್ಧತಿಯು ಪ್ರಾಯಃ ಋಗ್ವೇದಿಗಳಿಗೂ ಸಾಮವೇದಿಗಳಿಗೂ, ಯಜುರ್ವೇದಿಗಳಿಗೂ ಇಲ್ಲಿ ಒಂದೇ ರೀತಿಯಲ್ಲಿಯೇ ಇರುವುದು. ವಾಗ್ದಾನದಲ್ಲಿ ಮಾತ್ರ ಭೇದವುಂಟು. ಮೇಲೆ ಬರೆದಿರುವಂತೆ ಯಜುರ್ವೇದಿಗಳಲ್ಲಿ ವಾಗ್ದಾನವೂ ಉಂಟು. ಅಲ್ಲದೆ ವಿವಾಹದ ದಿವಸದಲ್ಲಿ ಕುಶಸಹಿತವಾದ ಉದಕದಿಂದ ದಾನವೂ ನಡೆಯುವುದು. ಉದಕಧಾರಾಪೂರ್ವಕವಾದ ದಾನವೇ ಮುಖ್ಯವಾದುದು.

„ ಅದ್ಭಿರೇವದ್ವಿಜಾಗ್ರ್ಯಾಣಾಂ ಕನ್ಯಾದಾನಂ ವಿಶಿಷ್ಯತೆ |
ಇತರೇಷಾಂತು ವರ್ಣಾನಾಮಿತರೇತರಕಾಮ್ಯಯಾ ||"

ಎಂದು ಮನುಸ್ಮೃತಿಯಲ್ಲಿರುವುದು. ಉದಕದಾನ ಪೂರ್ವಕಮೇವ ಬ್ರಾಹ್ಮಣಾನಾಂ ಕನ್ಯಾದಾನಂ ಪ್ರಶಸ್ತಂ, ಕ್ಷತ್ರಿಯಾದೀನಾಂ ಪುನಃ ವಿನಾಪ್ಯುದಕಂ ಪರಸ್ಪರೇಚ್ಛಯಾ ವಾಙ್ಮಾತ್ರೇಣಾಪಿ ಕನ್ಯಾದಾನಂಭವತಿ; ಉದಕಪೂರ್ವಮಿತ್ಯನಿಯಮಃ, ಎಂದು ಕುಲ್ಲೂಕಭಟ್ಟರು ವ್ಯಾಖ್ಯಾನ ಮಾಡಿರುವರು. ಉದಕದ್ವಾರಾ ಕನ್ಯಾದಾನವೇ ಬ್ರಾಹ್ಮಣರಿಗೆ ಶ್ರೇಷ್ಠವಾದುದು. ಕ್ಷತ್ರಿಯರೇ ಮೊದಲಾದವರ ಪರಸ್ಪರೇಚ್ಛಾ ವಿವಾಹದಲ್ಲಿ ವಾಙ್ಮಾತ್ರದಿಂದಲೂ ಕನ್ಯಾದಾನವಾಗುವುದು.

ಆದರೂ ಉದಕಪೂರ್ವಕವಾದ ದಾನವೇ ನಿಯುತವಾಗಿರುವುದು. ಆದುದರಿಂದ ವಾಗ್ದಾನವಾಗಲಿ ಆಗದಿರಲಿ, ಇಲ್ಲವೆಂದರೆ ದೋಷವೇನೂ ಇರುವುದಿಲ್ಲ. ಆದರೆ ವಾಗ್ದಾನವಾದ ಮೇಲೆ ಈಗ ನಾವು ಕನ್ಯಾದಾನವೆಂದು ವ್ಯವಹರಿಸುವ ದಾನಕ್ಕೆ ಉದಕಪೂರ್ವಕವಾಗಿರುವುದೇ ಆವಶ್ಯಕವು.

ಪದ್ಧತಿಗೆ ಅನುಸಾರವಾಗಿ ಮಂತ್ರವನ್ನು ಪಠಿಸಿ ಉದಕಧಾರಾಪೂರ್ವಕವಾಗಿ ಕನ್ಯೆಯನ್ನು ದಾನಮಾಡಿ ಕನ್ಯೆಯ ತಂದೆಯು ವಿವಾಹ ವಿಷಯದ ತನ್ನ ಕರ್ತವ್ಯದಲ್ಲಿ ನಿಶ್ಚಿಂತನಾಗುವನು. ಆದುದರಿಂದಲೇ ಆದು ಮೊದಲು ವರನು ಕನ್ಯೆಗೆ ಪತಿಯಾಗುವನು. ಮತ್ತು ಕನ್ಯೆಯನ್ನು ಭಾರ್ಯೆಯನ್ನಾಗಿ ಸ್ವೀಕರಿಸುವನು. ಇಷ್ಟಾದರೂ ಕನ್ಯೆಗೆ ಧರ್ಮಪತ್ನೀಭಾವವು ಸಿದ್ಧಿಸುವುದಿಲ್ಲ. ಅನಂತರದಲ್ಲಿ ಸಪ್ತಪದಿಯ ಮೂಲಕವಾಗಿ ಕನ್ಯೆಯನ್ನು ಗ್ರಹಿಸಿದ ಮೇಲೆ ವಿವಾಹ ಮಂತ್ರಗಳಿಂದ ಕನ್ಯೆಯು ಧರ್ಮಭಾರ್ಯೆಯಾಗುವಳು.

ಹೀಗೆ ಮೊದಲು ವಾಗ್ದಾನವಾಗುವುದು. ಅದಾದ ಮೇಲೆ ಜಲಪೂರ್ವಕ ದಾನದಿಂದ ಪತಿಭಾವವೂ ಭಾರ್ಯಾಭಾವವೂ ಉಂಟಾಗುವುದು. ಆದರ ಮೇಲೆ ಸಪ್ತಪದೀಗಮನದಿಂದಲೂ ಪಾಣಿಗ್ರಹಣ ಮಂತ್ರಗಳಿಂದಲೂ ಧರ್ಮಪತ್ನೀಭಾವವು ಸದ್ಧಿಸುವುದು.

ಮಂಗಲಾರ್ಥಂಸ್ವಸ್ತ್ಯಯನಂ ಯಜ್ಞಶ್ಚಾಸಾಂ ಪ್ರಜಾಪತೇಃ
ಪ್ರಯುಜ್ಯತೆ ವಿವಾಹೇಷು ಪ್ರಧಾನಂ ಸ್ವಾಮ್ಯಕಾರಣಂ |
ಪಾಣಿಗ್ರಹಣಿಕಾಮಂತ್ರಾ ನಿಯತಂ ದಾರಲಕ್ಷಣಂ |
ತೇಷಾಂನಿಷ್ಠಾತುವಿಜ್ಞೇಯಾ ವಿದ್ವದ್ಭಿಸ್ಸಪ್ತಮೇಪದೆ ||

ಮಂಗಳಾರ್ಥಮಿತಿ ಯದಾಸಾಂ ಸ್ವಸ್ತ್ಯಯನಂ ಶಾನ್ತ್ಯರ್ಥ ಮಂತ್ರವಚನಾದಿರೂಪಂ ಯಶ್ಚಾಸಾಂಪ್ರಜಾಪತಿಯಾಗಃ ವಿವಾಹೇಷುಕ್ರಿಯತೆ ತನ್ಮಂಗಳಾರ್ಥಂ ಅಭೀಷ್ಟ ಸಂಪತ್ತ್ಯರ್ಥಂ ಕರ್ಮ ಯತ್ಪುನಃ ಪ್ರಥಮಸಂಪ್ರದಾನಂ ವಾಗ್ದಾನಾತ್ಮಕಂ ತದೇವಭರ್ತುಃ ಸ್ವಾಮ್ಯಜನಕಂ ತತಶ್ಚ ವಾಗ್ದಾನಾದಾರಭ್ಯ ಸ್ತ್ರೀ ಭರ್ತೃಪರತಂತ್ರಾ, ತಸ್ಮಾತ್ತಾಂಶುಶ್ರೂಷೇತೇತಿ ಪೂರ್ವೋಕ್ತಶೇಷಃ ಯತ್ತುನವಮೆ ವಕ್ಷ್ಯತೆ ತೇಷಾಂ ನಿಷ್ಠಾತುವಿಜ್ಞೇಯಾ ವಿದ್ವದ್ಭಿಸ್ಸಪ್ತಮೇಪದೆ ಇತಿತತ್ ಭಾರ್ಯಾತ್ವ ಸಂಸ್ಕಾರಾರ್ಥಮಿತ್ಯವಿರೋಧಃ ಪಾಣಿಗ್ರಹಣಿಕಾ ವೈವಾಹಿಕಾ ಮಂತ್ರಾನಿಯತಂ ಭಾರ್ಯಾತ್ವೆನಿಮಿತ್ತಂ ತೈರ್ಮಂತ್ರೈರ್ಯಥಾ ಶಾಸ್ತ್ರಂಪ್ರಯುಕ್ತೈಃ ಭಾರ್ಯಾತ್ವನಿಷ್ಪತ್ತೆಃ ತೇಷಾಂಮಂತ್ರಾಣಾಂ ಸಖಾಸಪ್ತಪದೀಭವೇತಿಮಂತ್ರೇಣ ಕನ್ಯಾಯಾಸ್ಸಪ್ತ

ಮೇದತ್ತೆ ಪದೇಭಾರ್ಯಾತ್ವನಿಷ್ಪತ್ತಿಃ. ಶಾಸ್ತ್ರಜ್ಞೈಃಸ್ಸಮಾಪ್ತಿಃ ವಿಜ್ಞೆಯಾ, ಏವಂಚ. ಸಪ್ತಪದೀ ದಾನತ್ವಾ, ಗ್ಭಾರ್ಯಾತ್ವಾನಿಷ್ಪತ್ತಿಃ ಸತ್ಯನುಶಯೆ ಜಹ್ಯಾನ್ನೋರ್ಧ್ವಂ ||

ವಿವಾಹದಲ್ಲಿ ದಾನದ (ವಾಗ್ದಾನ ಮತ್ತು ಜಲದಾನ) ಮೂಲಕ ಸ್ವಾಮಿತ್ವಸಂಬಂಧವುಂಟಾಗುವುದು. ಅಲ್ಲದೆ ಪಾಣಿಗ್ರಹಣದ ಮಂತ್ರಗಳಿಂದಲೂ, ಸಪ್ತಪದೀಗಮನದಿಂದಲೂ, ಭಾರ್ಯಾತ್ವಸಂಬಂಧವು ದೃಢವಾಗುವುದು. ಇವುಗಳು ವಿನಾ ಉಳಿದ ಮಂತ್ರ ಪಾಠಗಳೂ, ಕರ್ಮಗಳೂ, ವರಕನ್ಯೆಯರ ಮಂಗಳಕ್ಕಾಗಿ ಆಗಿರುವವು. ಇದರಿಂದ ವಾಗ್ದಾನವಾಗುವುದರಿಂದಲೇ ಸ್ತ್ರೀಯು ಸ್ವಾಮಿಗೆ ಅಧೀನಳಾಗುವಳು. ಆದುದರಿಂದ ಆಗಿನಿಂದಲೂ ಸ್ತ್ರೀಯಾದವಳು ಮನಸ್ಸಿನಿಂದ ಪತಿಗೆ ಸೇವಕಿಯಾಗಬೇಕು. ದಾನದಿಂದಲೇ ಸ್ವಾಮಿತ್ವವುಂಟಾಗುವುದೆಂಬ ಮನುವಚನದಿಂದ ವಿಧಿಪೂರ್ವಕವಾದ ವಾಗ್ದಾನದ * ಅನಂತರದಲ್ಲಿ ಕನ್ಯೆಗೆ ಪತಿವಿಯೋಗವಾದರೆ ಕನ್ಯೆಯು ವಿಧವೆಯಾಗುವಳು. ಇದು ವಿಧಿಯಿಂದಲೂ ಯುಕ್ತಿಯಿಂದಲೂ ಸಿದ್ಧವಾಗುವುದರಿಂದ ಅದರ ಮುಂದಿನ ಕ್ರಿಯೆಗಳಾದ ಮೇಲೆ ವರನು ಮೃತನಾದರೆ ಕನ್ಯೆಯು ವಿಧವೆಯಾಗುವಳೆಂಬುವದೂ ಸಹಾ ಇದರಿಂದಲೇ ಸಿದ್ಧವಾಗುವುದು. ಇದರಿಂದ ವರಪೂಜೆಯಾದ ವೇಳೆಯಾಗಲಿ ಕನ್ಯಾದಾನವಾದ ಮೇಲೆಯಾಗಲಿ, ಕುಶಕಂಡಿಕೆಯು ಅಗ್ನಿಸ್ಥಾಪನವಾದ ಮೇಲೆಯಾಗಲಿ, ಹೋಮವಾದ ಮೇಲೆಯಾಗಲಿ. ಸಪ್ತಪದೀಗಮನಾನಂತರದಲ್ಲಿಯಾಗಲಿ, ಅಥವಾ ಪಾಣಿಗ್ರಹಣಾನಂತರದಲ್ಲಿಯಾಗಲಿ, ವರನು ಮೃತನಾದರೆ ಕನ್ಯೆಯು ವಿಧವೆಯಾಗುವಳು. ಎಂಬ ಮಾತು'' ವಾಚಾಸತ್ಯೈಕೃತೆಪತಿಃ ಎಂಬ ಮನುವಚನದಿಂದ ಸಿದ್ಧವಾಗುವದು.

ಆದರೆ ವಸಿಷ್ಠರು ವಾಗ್ದಾನದಮೇಲೆ (ವಾಚಾದತ್ತಾ) ಜಲ ಪೂರ್ವದಾನವಾದಮೇಲೆ (ಅದ್ಭಿರ್ದತ್ತಾ) ವರನು ಮೃತನಾದರೆ ಕನ್ಯೆಯ ಕನ್ಯಾತ್ವವು ನಷ್ಟವಾಗದೆ ಆ ಕನ್ಯೆಯು ತಂದೆಗೆ ಸೇರಿದವಳೇ ಆಗುವಳು. ಅಂದರೆ ದಾನಮಾಡುವುದಕ್ಕೆ ಮೊದಲು ತಂದೆಯು ತನ್ನ ಇಷ್ಟದಂತೆ ಯಾರಿಗೆಬೇಕಾದರೂ ದಾನಮಾ

---

* ವಿಧಿಪೂರ್ವಕ ವಾಗ್ದಾನವು ವರಪೂಜನಪೂರ್ವಕವಾಗಿಯೇ ಆಗುವುದು. ಆದುದರಿಂದಲೇ ಪ್ರಕೃತದಲ್ಲಿ ಲಗ್ನಪತ್ರಿಕೆಯನ್ನು ಬರೆದಮೇಲೆ ವರನು ಮೃತನಾದರೆ ಅದು ವರಪೂಜನ ಪೂರ್ವಕವಾದ ವಿಧಿಯಲ್ಲದುದರಿಂದ ಕನ್ಯೆಯು ದೂಷಿತಳಾಗಲಿಲ್ಲವೆಂದು ಭಾವಿಸಿ ಮತ್ತೊಬ್ಬನಿಗೆ ವಿವಾಹಮಾಡುವರು.

ಡುವುದಕ್ಕೆ ಅಧಿಕಾರವಿದ್ದಂತೆಯೇ ಈಗಲೂ ಇರುವದು. ಮಂತ್ರಪೂರ್ವಕ ಪಾಣಿಗ್ರಹಣವಾದಮೇಲೆ ತಂದೆಗೆ ಆ ಅಧಿಕಾರವಿರುವದಿಲ್ಲವೆಂದು ಹೇಳುವರು. ಈ ವಸಿಷ್ಠವಚನದಿಂದ ಕನ್ಯೆಯು ಮಂತ್ರೋಪನೀತಳಾಗುವವರೆಗೂ ಅಂದರೆ ಪಾಣಿಗ್ರಹಣಮಂತ್ರಗಳಿಂದ ಸಂಸ್ಕಾರವುಳ್ಳವಳಾಗುವದರೊಳಗೆ ವರನು ಮೃತನಾದರೆ ಮತ್ತೊಬ್ಬ ವರನಿಗೆ ಅರ್ಪಣಮಾಡುವ ಅಧಿಕಾರವು ತಂದೆಗೆ ಇರುವುದು. ಆದರೆ ಆ ಕನ್ಯೆಯು ವಾಗ್ದತ್ತಳಾಗಿದ್ದರೂ ಜಲಪೂರ್ವಕ ದಾನಮಾಡಲ್ಪಟ್ಟವಳಾಗಿದ್ದರೂ ಪೂರ್ವದಂತೆಯೇ ಇನ್ನೊಬ್ಬ ವರನಿಗೆ ವಿಧಿಪೂರ್ವಕವಾಗಿ ದಾನಮಾಡಲ್ಪಡಬಹುದು. ಪಾಣಿಗ್ರಹಣ ಮಂತ್ರಗಳ ಮೂಲಕ ಸಂಸ್ಕಾರವಾದಮೇಲೆ ವರನು ಮೃತನಾದರೆ ತಂದೆಗೆ ಅಧಿಕಾರವಿರುವುದಿಲ್ಲ. ಎಂದು ಸ್ಪಷ್ಟಪಡುವುದು.

ಆದರೆ ಪಾಠಕರು ವಿಚಾರಮಾಡಿ ನೋಡಬೇಕು. ವಿವಾಹಮಂತ್ರಗಳಲ್ಲಿ ವರಪೂಜೆಯನ್ನಾರಂಭಿಸಿ ಕನ್ಯಾದಾನದವರೆಗೆ ಆಗಬೇಕಾದ ಕಾರ್ಯಗಳೆಲ್ಲವೂ ಕನ್ಯೆಯ ತಂದೆಯು ಮಾಡಬೇಕಾದವುಗಳಾಗಿಯೂ ಪಾಣಿಗ್ರಹಣವೇ ಮೊದಲಾದ ಕಾರ್ಯಗಳೆಲ್ಲವೂ ವರನ ಕರ್ತವ್ಯಗಳಾಗಿಯೂ ಇವೆ. ಹೀಗೆ ಕನ್ಯಾಪಿತನು ದಾನದ ಕೆಲಸಗಳನ್ನೆಲ್ಲವನ್ನು ಮುಗಿಸಿದಮೇಲೆ ಪುನಃ ದಾನಮಾಡುವ ಅಧಿಕಾರವು ಅವನಿಗೆ ಆವ ರೀತಿಯಿಂದಲೂ ಇರಲಾರದು. ಬ್ರಾಹ್ಮವಿವಾಹದಲ್ಲಿ ಕನ್ಯಾ ಸಂಪ್ರದಾನವು ಪತಿಭಾವವನ್ನುಂಟುಮಾಡುವದೆಂತಲೂ ಪಾಣಿಗ್ರಹಣ ಸಪ್ತಪದೀಗಮನಗಳಿಂದ ಧರ್ಮಪತ್ನೀ ಭಾವವು ಸಿದ್ಧವಾಗುವದೆಂತಲೂ ಹಿಂದೆ ಹೇಳಿದ ಮನುವಚನದಿಂದ ಸ್ಪಷ್ಟಪಡುವದು.

ಆವುದಾದರೊಂದು ಬ್ರಾಹ್ಮವಿವಾಹದಲ್ಲಿ ಕನ್ಯಾಸಂಪ್ರದಾನವಾಗಿ ಯಥಾವಿಧಿ ಪಾಣಿಗ್ರಹಣವಾಗದೆ ಇದ್ದರೆ ಹೇಗೆ ನಡೆಯಬೇಕೆಂಬುವುದನ್ನು ಮನಸ್ಸಿನಲ್ಲಿ ವಿಚಾರಮಾಡಬೇಕು. ತಂದೆಯು ದಾನ ಮಾಡಿಕೊಟ್ಟಮೇಲೆ ಕನ್ಯೆಯು ಆ ವರನನ್ನು ತನ್ನ ಪತಿಯೆಂದು ತಿಳಿದುಕೊಂಡು ಅವನ ಸೇವೆಯನ್ನು ಮಾಡಬೇಕು. ಹಾಗೆಮಾಡದೆ ಇದ್ದರೆ ಅವಳು ವ್ಯಭಿಚಾರಿಣಿಯೆನ್ನಿಸುವಳು. ಅಂತಹ ಸಮಯದಲ್ಲಿ ಪತಿಯು ಮೃತನಾದರೆ ಆ ಕನ್ಯೆಯು ವಿಧವೆಯರೀತಿಯಲ್ಲಿ ಇರಬೇಕು. ಆದರೆ ಇಂತಹ ಕನ್ಯೆಯು ವರನ ಧರ್ಮಪತ್ನಿಯಾಗಲಾರಳು. ಅವಳ ಗರ್ಭದಲ್ಲಿ ಜನಿಸುವ ಸಂತಾನವೂ ಔರಸಪುತ್ರನಾಗಲಾರನು. ಸಮಾನವರ್ಣದವಳಲ್ಲದಿದ್ದರೆ ಧರ್ಮಪತ್ನಿಯಾಗಲಾರಳಾದುದರಿಂದ ಪಾಣಿಗ್ರಹಣದ ಮಂತ್ರಗಳನ್ನು ಸಮಾನವರ್ಣದವಳ ವಿವಾಹದಲ್ಲಿಯೇ ಉಚ್ಚರಿಸಬೇಕು. ಅಸವರ್ಣ ಕನ್ಯೆಯ ವಿವಾಹದಲ್ಲಿ ಪಾಣಿಗ್ರ

ಹಣ ಮಂತ್ರಗಳ ಪ್ರಯೋಗವಿರುವದಿಲ್ಲ. ಆದುದರಿಂದಲೇ ಅವಳು ಧರ್ಮಪತ್ನಿ ಎಂದೆನಿಸಿಕೊಳ್ಳುವದಿಲ್ಲ. ಆದರೆ ಕನ್ಯೆಯನ್ನು ತಂದೆಯು ದಾನಮಾಡಿಕೊಡುವದರಿಂದ ಯಾರಿಗೆ ಕೊಟ್ಟರೂ ಅವನು ಆ ಕನ್ಯೆಯ ಪತಿಯಾಗುವನು. ಆ ಪತಿಯು ಮೃತನಾದರೆ ಆ ಕನ್ಯೆಯು ವಿಧವೆಯಾಗುವಳು. ಮತ್ತು ಅವಳು ಆ ಪತಿಯ ವಿಷಯದಲ್ಲಿ ಪತಿವ್ರತಾ ಸ್ತ್ರೀಯರ ಕರ್ತವ್ಯವನ್ನು ಪಾಲಿಸುತ್ತಿರಬೇಕು.

ಹಿಂದೆ ಹೇಳಿದ ಮಂಗಲಾರ್ಥ, ಇತ್ಯಾದಿ ವಚನದ ವ್ಯಾಖ್ಯಾನದಲ್ಲಿ ಕುಲ್ಲೂಕ ಭಟ್ಟರು ಹೀಗೆಯೇ ವ್ಯವಸ್ಥೆಮಾಡಿರುವರು.

ಮನುಸ್ಮೃತಿಯಲ್ಲಿ

ಪಾಣಿಗ್ರಹಣ ಸಂಸ್ಕಾರಃ ಸವರ್ಣಾಸೂಪದಿಶ್ಯತೆ |
ಅಸವರ್ಣಾಸ್ವಯಂಜ್ಞೇಯೋ ವಿಧಿರುದ್ವಾಹಕರ್ಮಣಿ ||
ಶರಃಕ್ಷತ್ರಿಯಯಾಗ್ರಾಹ್ಯಃ ಪ್ರತೋದೋವೈಶ್ಯಕನ್ಯಯಾ |
ವಸನಸ್ಯದಶಾಗ್ರಾಹ್ಯಾ ಶೂದ್ರಯೋತ್ಕೃಷ್ಟವೇದನೆ ||

ಎಂತಲೂ ವ್ಯಾಖ್ಯಾನದಲ್ಲಿ-ಪಾಣೀತಿ ಸಮಾನಜಾತೀಯಾಸುಗೃಹ್ಯಮಾಣಾಸು ಹಸ್ತಗ್ರಹಣಲಕ್ಷಣಃ ಸಂಸ್ಕಾರೊ ಗೃಹ್ಯಾದಿ ಶಾಸ್ತ್ರೇಣ ವಿಧೀಯತೆ ವಿಜಾತೀಯಾಸು ಪುನರುಹ್ಯಮಾನಾಸು ವಿವಾಹ ಕರ್ಮಣಿ ಪಾಣಿಗ್ರಹಣಸ್ಥಾನೆ ಅಯಮನಂತರ ಶ್ಲೋಕೆ ವಕ್ಷ್ಯಮಾಣೊ ವಿಧಿರ್ಜ್ಞೇಯಃ ಶರಇತಿ ಕ್ಷತ್ರಿಯಯಾ ಪಾಣಿಗ್ರಹಣಸ್ಥಾನೆ ಬ್ರಾಹ್ಮಣ ವಿವಾಹೆ ಬ್ರಾಹ್ಮಣ ಹಸ್ತಪರಿಗೃಹೀತ ಕಾಂಡೈಕ ದೇಶೋಗ್ರಾಹ್ಯಃ ವೈಶ್ಯಯಾ ಬ್ರಾಹ್ಮಣ ಕ್ಷತ್ರಿಯ ವಿವಾಹೆ ಬ್ರಾಹ್ಮಣ ಕ್ಷತ್ರಿಯ ವಿಧೃತ ಪ್ರತೋದೈಕದೇಶೋ ಗ್ರಾಹ್ಯಃ ಶೂದ್ರಯಾಪುನಃ ದ್ವಿಜಾತಿತ್ರಯ ವಿವಾಹೆ ಪ್ರಾವೃತವಸನದಶಾಗ್ರಾಹ್ಯಾ ಎಂದಿರುವುದು. ಸವರ್ಣ ಸ್ತ್ರೀಯೊಂದಿಗೆ ಪಾಣಿಗ್ರಹಣ ಸಂಸ್ಕಾರವನ್ನು ಮಾಡಬೇಕು. ಅಸವರ್ಣ ಸ್ತ್ರೀಯೊಂದಿಗೆ ನಡೆಯುವ ವಿವಾಹ ಕರ್ಮದಲ್ಲಿ ಪಾಣಿಗ್ರಹಣದ ಸ್ಥಾನದಲ್ಲಿ ಮುಂದೆ ಹೇಳುವ ವಿಧಿಯನ್ನನುಸರಿಸಬೇಕು. ಅನುಲೋಮ ಕ್ರಮದಿಂದ ವಿವಾಹದಲ್ಲಿ ಕ್ಷತ್ರಿಯ ಕನ್ಯೆಯು ಶರವನ್ನೂ ವೈಶ್ಯಕನ್ಯೆಯು ಕೊರಡಾವನ್ನೂ ಶೂದ್ರಕನ್ಯೆಯು ವಸ್ತ್ರದ ಶೆರಗನ್ನೂ ಗ್ರಹಣಮಾಡಬೇಕು. ಎಂದು ಇದರ ಅರ್ಥವು. ಇದನ್ನು ವಿಚಾರಮಾಡಿದರೆ ಅಸವರ್ಣಾಳ ವಿವಾಹದಲ್ಲಿ ಪಾಣಿಗ್ರಹಣವಿರುವದಿಲ್ಲ. ಈ ಕಾರಣದಿಂದ ಪಾಣಿಗೃಹೀತಳಾದ ಸವರ್ಣ ಸ್ತ್ರೀಯಂತೆ ಅಸವರ್ಣಾಳು ಧರ್ಮಪತ್ನಿಯಾಗುವುದಿಲ್ಲವಾದುದರಿಂದ ಇವರಿಬ್ಬರೂ

ಸಮಾನರಲ್ಲ. ಆದರೆ ಪತಿಭಾವದಲ್ಲಿ ಮಾತ್ರ ಇಬ್ಬರೂ ಸಮಾನರೇ. ಪಾತಿವ್ರತ್ಯ ಧರ್ಮವನ್ನು ಸವರ್ಣಗಳು ಪಾಲಿಸುವಂತೆಯೇ ಅಸವರ್ಣಗಳೂ ಪಾಲಿಸಬೇಕು. ಅದರಲ್ಲಿ ಯಾವ ಭೇದವೂ ಇರುವುದಿಲ್ಲವೆಂದು ಸ್ಪಷ್ಟವಾಗುವುದು.

ಕನ್ಯಾಸಂಪ್ರದಾನದಿಂದಲೇ ಪತಿಭಾವವು ಸಿದ್ಧವಾಗುವುದರಿಂದ ಪಾಣಿಗ್ರಹಣವಾಗುವುದಕ್ಕೆ ಮೊದಲು ವರನು ಮೃತನಾದರೆ ದತ್ತಳಾದ ಕನ್ಯೆಯು ವಿಧವೆಯಾಗಲೇಬೇಕು. ಇದು ಮನುವಿನ ಮತವು. ಪಾಣಿಗ್ರಹಣ ಕಾರ್ಯದಲ್ಲಿ ಕನ್ಯಾಪಿತನ ಕರ್ತವ್ಯವೇನೂ ಇರುವುದಿಲ್ಲ. ಕನ್ಯಾಪಿತನ ಕರ್ತವ್ಯವೆಲ್ಲವೂ ಕನ್ಯಾದಾನದವರಗೇನೇ ಇರುವದು. ತಂದೆಯು ಮೂಲಕ ಒಂದುಸಲ ದಾನವಾದ ಮೇಲೆ ಪುನಃ ದಾನಮಾಡುವ ಅಧಿಕಾರವು ಇರುವುದಿಲ್ಲ.

"ಸಕೃದಂಶೋ ನಿಪತತಿ ಸಕೃತ್ಕನ್ಯಾ ಪ್ರದೀಯತೆ |
ಸಕೃದಾಹದದಾನೀತಿ ತ್ರೀಣ್ಯೇತಾನಿ ಸತಾಂ ಸಕೃತ್ ||

ಧನವಿಭಾಗದಲ್ಲಿ ಒಂದೇ ಆವರ್ತಿ ಹಂಚಿಕೆಯಾಗಬೇಕು. ಕನ್ಯಾದಾನವು ಒಂದೇ ಆವರ್ತಿ ನಡೆಯತಕ್ಕುದು. ದಾನಮಾಡಿದೆನು ಎಂಬ ಮಾತು ಒಂದೇ ಆವರ್ತಿ ಹೇಳತಕ್ಕದ್ದು. ಸತ್ಪುರುಷರು ಇವು ಮೂರನ್ನೂ ಒಂದೇ ಆವರ್ತಿ ಮಾಡವರು, ಎಂದು ಮನುಸ್ಮೃತಿಯಲ್ಲಿ ಹೇಳಿರುವುದು. ಆದುದರಿಂದ ಕನ್ಯಾದಾನವಾದ ನಂತರದಲ್ಲಿ ಪುನಃ ಆ ಕನ್ಯೆಗೆ ದಾನವಿರುವುದಿಲ್ಲ. ದಾನವಾದ ಒಡನೆಯೇ ತಂದೆಯ ದಾನಕಾರ್ಯವು ಸಮಾಪ್ತವಾಗುವುದರಿಂದಲೂ ವರನು ಗ್ರಹಣ ಮಾಡಿದುದರಿಂದಲೂ, ಆ ಕನ್ಯೆಯು ಪಾಣಿಗ್ರಹಣವಾಗಲಿ, ಆಗದಿರಲಿ, ತಂದೆಗೆ ಅವಳನ್ನು ಪುನಃ ದಾನಮಾಡುವ ಅಧಿಕಾರವಿರುವುದಿಲ್ಲ.

ಒಂದ ಸಲ ದಾನ ಮಾಡಿದಮೇಲೆ ಅಥವಾ ದಾನಮಾಡಿದೆನು, ಎಂದು ಹೇಳಿದಮೇಲೆ ಸತ್ಪುರುಷರು ಪುನಃ ದಾನ ಮಾಡಲಾರರು, ಎಂಬುವುದು ಸ್ವಯಂ ಸಿದ್ಧವಾಗಿರುವುದು. ಆದರೆ ದಾನವನ್ನು ಮಾಡದೆಯೂ ದಾನಮಾಡುವೆನು. ಎಂದು ಹೇಳದೆಯೂ ಇದ್ದರೆ ಆ ವಸ್ತುವು ದಾನ ಮಾಡತಕ್ಕವನದೇ ಆಗಿರುವುದು. ಅಂದರೆ ಅವನು ಆ ಪದಾರ್ಥವನ್ನು ಯಾರಿಗೆ ಬೇಕಾದರೂ ಕೊಡಬಹುದು. ಕೊಡದೆ ಇರಲೂ ಬಹುದು. ವಾಗ್ದಾನದ ಸಮಯದಲ್ಲಿ ಸಂಪ್ರದಾನವಾಗುವುದಿಲ್ಲ. ಉದಕಪೂರ್ವಕವಾಗಿ ದಾನ ಮಾಡಬೇಕಾದ ನಿಯಮವು ಏರ್ಪಟ್ಟಿರುವುದರಿಂದ ವಿಧಿಪೂರ್ವಕವಲ್ಲದ ದಾನವು ಸಿದ್ಧಿಸುವುದಿಲ್ಲ. "ದಾತುಂತವಾಹಂ ಪ್ರತಿಜಾನೆ" ಈ ಕನ್ಯೆಯನ್ನು ನಿನಗೆ ಕೊಡುವುದಾಗಿ ಪ್ರತಿಜ್ಞೆಮಾಡುತ್ತೇನೆ ಎಂದು

ಹೇಳಿದ ಮಾತ್ರದಿಂದ ದಾನದ ಕಾರ್ಯಗಳೆಲ್ಲವೂ ನಡೆಯಲಿಲ್ಲ. ಆದುದರಿಂದ 'ಸಕೃದಾಹ ದದಾನೀತಿ' 'ಸಕೃತ್ಕನ್ಯಾ ಪ್ರದೀಯತೆ' ಈ ವಾಕ್ಯಗಳಿಂದ ವಾಗ್ದಾನಾನಂತರದಲ್ಲಿ ಆವುದಾದರೂ ವಿಶೇಷ ಕಾರಣದಿಂದ ತಂದೆಯು ವಾಗ್ದತ್ತಳಾದ ಕನ್ಯೆಯನ್ನು ಮತ್ತೊಬ್ಬ ವರನಿಗೆ ಕೊಡುವುದಾದರೆ ಅದು ಮನುವಿಗೆ ಅಭಿಮತವಲ್ಲವೆಂದು ಹೇಳಲಾಗುವುದಿಲ್ಲ. ಧರ್ಮದಲ್ಲಿ ಪ್ರಬಲಾನುರಾಗವು ಕೃತಯುಗದಲ್ಲಿದ್ದಂತೆ ಜನಗಳಲ್ಲಿ ಇದ್ದ ಕಾಲದಲ್ಲಿ ಪ್ರತಿಜ್ಞೆಯನ್ನೂ ಕೂಡ ಕಾರ್ಯ ನೆರವೇರಿದಂತೆಯೇ ತಿಳಿಯುತ್ತಿದ್ದರು. ಆದುದರಿಂದ ಧರ್ಮದ ಪ್ರಬಲದೆಶೆಯಲ್ಲಿ ಜಲಪೂರ್ವಕ ದಾನದ ಅನುಷ್ಠಾನವಿದ್ದರೂ ವಾಗ್ದಾನವಾಯಿತೆಂದರೆ ವರನು ಮೃತನಾದರೆ ಧರ್ಮಾತ್ಮರಾದ ಸಜ್ಜನರು ಆ ಕನ್ಯೆಗೆ ಮತ್ತೊಬ್ಬ ವರನೊಂದಿಗೆ ವಿವಾಹ ಸಂಬಂಧವನ್ನು ಮಾಡುತ್ತಿರಲಿಲ್ಲ. ಸ್ತ್ರೀಯರುಗಳಿಗೂ ಧರ್ಮದಲ್ಲಿ ಅಧಿಕವಾದ ಅನುರಾಗವಿದ್ದುದರಿಂದ ತಂದೆಯು ವಾಗ್ದಾನದ ಪ್ರತಿಜ್ಞೆಯನ್ನು ಮಾಡಿದಮೇಲೆ ವರನು ಮೃತನಾದರೆ ಆ ಕನ್ಯೆಯು ಅನ್ಯಪತಿಯನ್ನು ಸ್ವೀಕರಿಸದೆ ವಿಧವೆಯಂತೆ ತನ್ನ ಆಚರಣವನ್ನು ಇಟ್ಟುಕೊಳ್ಳುತ್ತಿದ್ದಳು. ಈಗಿನ ಸಂದರ್ಭದಲ್ಲಿ ಅಂತಹ ವಾಗ್ದಾನವಿರುವುದಿಲ್ಲ. ವಿವಾಹಕ್ಕೆ ಮೊದಲು ವಿಧಿಪೂರ್ವಕವಾದ ವಾಗ್ದಾನವನ್ನು ಯಾರೂ ಮಾಡುವುದಿಲ್ಲ. ಅದ್ಭಿರೇವದ್ವಿಜಾಗ್ರ್ಯಾಣಾಂ ಎಂಬ ಮನುವಚನವನ್ನನುಸರಿಸಿ ಒಂದಾವರ್ತಿ ಉದಕಪೂರ್ವಕವಾಗಿ ಕನ್ಯಾದಾನವನ್ನು ಮಾಡುತ್ತಿದ್ದರು. ಆದುದರಿಂದ ವಾಗ್ದಾನದ ಪ್ರಚಾರವಿಲ್ಲದಿದ್ದರೂ, ಉದಕಪೂರ್ವಕ ದಾನ ಮಾಡಿದುದರಿಂದಲೇ ಪುನಃ ಆ ದತ್ತಳಾದ ಕನ್ಯೆಯನ್ನು ದಾನಮಾಡಲು ಸಾಧ್ಯವಿರಲಿಲ್ಲ. ಮತ್ತು ಕನ್ಯಾದಾನವಾದಮೇಲೆ ವರನು ಮೃತನಾದರೆ ಕನ್ಯೆಯು ವಿಧವೆಯಂತೆ ಇರಬೇಕೆಂದು ನಿಶ್ಚಯವಾಗಿತ್ತು. ವಸಿಷ್ಠವಚನವನ್ನು ನೋಡಿದರೆ, ಉದಕಪೂರ್ವಕವಾಗಿ ಕನ್ಯೆಯನ್ನು ದಾನ ಮಾಡಿದಮೇಲೆ ವರನು ಮೃತನಾದರೂ ಕನ್ಯೆಯ ತಂದೆಯು ಆ ಕನ್ಯೆಯನ್ನು ಶಾಸ್ತ್ರೋಕ್ತವಾಗಿ ಮತ್ತೊಬ್ಬ ವರನಿಗೆ ಕೊಡಬಹುದಾಗಿ ಅರ್ಥವಾಗುವುದು.

ಜನಗಳ ಆಚರಣೆಯಲ್ಲಿ ಮನುವಿನ ಮತವೇ ಇರುವುದು. ವಸಿಷ್ಠರ ಮತವು ಇರುವುದಿಲ್ಲ.

ಈಗ ವಿವಾಹಕ್ಕೆ ಮೊದಲು ವಿಧಿಪೂರ್ವಕವಾದ ವಾಗ್ದಾನವು ನಡೆಯುವುದಿಲ್ಲ. ವಾಗ್ದಾನರೀತಿಯು ತಪ್ಪಿಹೋಗುವುದಕ್ಕೆ ಕಾರಣವೇನೆಂಬುದನ್ನು ವಿಚಾರಮಾಡಬೇಕು. ಮನುವಿನ ಆಜ್ಞೆಯೇ ಇದಕ್ಕೆ ಕಾರಣವೆಂಬುವದು ಸ್ಪಷ್ಟವಾಗು

ವುದರಲ್ಲಿ ಅಭ್ಯಂತರವಿಲ್ಲ. ವಾಗ್ದಾನವನ್ನು ಮಾಡಬೇಕೆಂಬ ವಿಧಿಯು ಇರುವುದಿಲ್ಲ. ವಾಗ್ದಾನಾನಂತರದಲ್ಲಿ ವರನ ಮೃತಿಯಾದರೆ ಕನ್ಯೆಯು ವಿಧವೆಯಂತೆ ಆಚರಣೆಯನ್ನು ಇಟ್ಟುಕೊಳ್ಳಬೇಕಾಗುವುದು. ಆದುದರಿಂದಲೇ ವಾಗ್ದಾನದ ರೀತಿಯನ್ನು ತೆಗೆದುಹಾಕಿರುವರು. ಜನಗಳು ಮನುಮತದಂತೆ ನಡೆಯದೆ ವಸಿಷ್ಠಮತದಂತೆಯೇ ನಡೆಯುವವರಾಗಿದ್ದರೆ ವಾಗ್ದಾನವನ್ನು ಇಟ್ಟುಕೊಳ್ಳುವುದರಿಂದ ಬಾಧಕವೇನೂ ಇರುತ್ತಿರಲಿಲ್ಲ. ಜನಗಳು ಇದನ್ನು ಬಿಡುತ್ತಲೂ ಇರಲಿಲ್ಲ.

ವಿವಾಹಕ್ಕೆ ಮೊದಲು ಲಗ್ನಕಟ್ಟುವರಷ್ಟೆ. ಅದನ್ನೇ ವಾಗ್ದಾನವೆಂದು ಕೆಲವರು ಹೇಳಬಹುದು. ಆದರೆ ಶಾಸ್ತ್ರೋಕ್ತವಾಗಿ ಮಂತ್ರವನ್ನು ಹೇಳಿ ನಡೆದ ಕೆಲಸವನ್ನೇ ಸಿದ್ಧವಾದುದನ್ನಾಗಿ ಎಲ್ಲರೂ ತಿಳಿದಿರುವರು. ಶಾಸ್ತ್ರದಲ್ಲಿ ಕನ್ಯಾವರರ ಮುತ್ತಜ್ಜ ಮೊದಲಾದವರ ಗೋತ್ರಪ್ರವರಗಳನ್ನು, ಉಚ್ಚರಿಸಿ ಕನ್ಯಾದಾನ ಮಾಡುವ ವಿಧಿಯು ಇರುವುದು. ಹಾಗೆ ಮಾಡದೆ ಕನ್ಯಾವರರುಗಳ ಹೆಸರನ್ನು ಹೇಳಿ ಈ ಕನ್ಯೆಯನ್ನು ಈ ವರನಿಗೆ ಕೊಟ್ಟಿದೆ ಎಂದು ಹೇಳಿದರೆ ಶಾಸ್ತ್ರೋಕ್ತವಾದ ಬ್ರಾಹ್ಮವಿವಾಹಕ್ಕೆ ಅನುಕೂಲವಾದ ಕನ್ಯಾದಾನವಾಯಿತೆಂದು ಆರಾದರೂ ಒಪ್ಪುವರೇ ? ಎಂದಿಗೂ ಒಪ್ಪಲಾರರು. ವಾಕ್ಯಗಳು ಬೇರೆಯಾದಾಗ್ಯೂ ಅವುಗಳ ತಾತ್ಪರ್ಯವು ಒಂದೇ ಆದರೆ ಅದರಿಂದ ಕಾರ್ಯ್ಯಸಿದ್ಧಿಯು ಏಕೆ ಆಗಬಾರದು ? ಎಂದರೆ ಶಾಸ್ತ್ರವಿಚಾರದಲ್ಲಿ ಈ ಯುಕ್ತಿಯು ಸಂಗತವಲ್ಲ. ಶಾಸ್ತ್ರಾನುಸಾರವಾಗಿ ಯಾವ ಕರ್ಮವಾದಮೇಲೆ ಯಾವ ಕರ್ಮವನ್ನು ಮಾಡಬೇಕೆಂಬ ವಿಧಿಯು ಇರುವುದೋ ಯಾವ ಕಾರ್ಯ್ಯದಲ್ಲಿ ಸಕಲ ಋಷಿವಾಕ್ಯಗಳು ಅಥವಾ ವೇದವಾಕ್ಯಗಳು ಇವುಗಳನ್ನು ಉಚ್ಚರಿಸಿ ಕರ್ಮಾನುಷ್ಠಾನ ಮಾಡುವ ಉಪದೇಶವಿರುವುದೋ ಅದರಲ್ಲಿ ಸ್ವಲ್ಪ ವ್ಯತ್ಯಾಸವುಂಟಾದರೂ ಆ ಕರ್ಮವು ಹೀನಾಂಗವಾಗಿಯೂ, ಅಸಿದ್ಧವಾಗಿಯೂ ಅಗ್ರಾಹ್ಯವಾಗಿಯೂ ಎಣಿಸಲ್ಪಡುವುದು ಇಲ್ಲವಾದರೆ ಈಗಿನ ಯುಕ್ತಿಗಳ ಮುಂದೆ ಬಾಯಿಯಿಂದ ಒಂದೆರಡು ಮಾತುಗಳನ್ನು ಹೇಳಿದ ಒಡನೆಯೇ ವಿವಾಹವು ಆಗಿಹೋಗುತ್ತಿತ್ತು. ಈ ಕನ್ಯೆಯನ್ನು ಈ ವರನಿಗೆ ಕೊಟ್ಟಿದೆ ಎಂದು ಇಷ್ಟು ಅಂದ ಮಾತ್ರದಿಂದಲೇ ತಂದೆಯು ದಾನಮಾಡಿದಂತೆಯೂ ಇವಳನ್ನು ನನ್ನ ಭಾರ್ಯೆಯೆಂದು ನಾನು ಒಪ್ಪಿರುವೆನು ಎಂದು ವರನು ಅಂದ ಮಾತ್ರದಿಂದಲೇ ವಿವಾಹವಾದಂತೆಯೂ ಆಗಿಹೋಗುತ್ತಿತ್ತು. ಆದರೆ ಸನಾತನ ವೈದಿಕ ಧರ್ಮವನ್ನರಿತಿರುವ ಭಾರತವಾಸಿಗಳಲ್ಲಿ ಇಂತಹ ವಿವಾಹವು ಸಂಭವಿಸುವುದಿಲ್ಲ. ಆದುದರಿಂದಲೇ ಪ್ರತಿಜ್ಞೆಯನ್ನು ಜ್ಞಾಪಕಮಾಡಿಕೊಡುವ ಲಗ್ನಪತ್ರಿಕೆ

ಯು ಒಕೆಯಲ್ಪಟ್ಟರೂ ಅದು ವಾಗ್ದಾನವೆನಿಸುವುದಿಲ್ಲ. ಇದಲ್ಲದೆ

ಯಸ್ಯಾಮ್ರಿಯೇತ ಕನ್ಯಾಯಾ ವಾಚಾಸತ್ಯೇ ಕೃತೇಪತಿಃ

ಎಂಬ ಮನುವಿನ ಅನುಶಾಸನವು ಭಾರತೀಯರಾದ ಧಾರ್ಮಿಕರಲ್ಲಿ ಪರಮಾದರಣೀಯವಾಗಿರುವದೆಂದು ತೋರುತ್ತದೆ. ಆದುದರಿಂದಲೇ ಲಗ್ನಪತ್ರದಲ್ಲಿ ಪ್ರತಿಜ್ಞಾವಾಕ್ಯವೇನಾದರೂ ಇದ್ದರೆ ಮನುವು ಹೇಳಿದಂತೆ ನಡೆಯಬೇಕಾಗಿ ಬರುವದೆಂದು ಬಂಗಾಳಾ ಮೊದಲಾದ ದೇಶಗಳಲ್ಲಿ ಲಗ್ನಪತ್ರಿಕೆಯಲ್ಲಿ ಬ್ರಹ್ಮಸಂಕಲ್ಪವಿದ್ದರೆ, ಎಂದು ವಾಕ್ಯ ಸಂಕೋಚವನ್ನು ಮಾಡುವರು.

ಯದ್ಯಪಿ ಲಗ್ನಪತ್ರವು ಶಾಸ್ತ್ರೋಕ್ತ ವಾಗ್ದಾನಕ್ಕೆ ಸಮನಲ್ಲ. ಇದರಲ್ಲಿ ಯಾವ ವಿಧವಾದ ವಿಘ್ನವು ಸಂಭವಿಸಿದರೂ ಹಿಂದೆ ಹೇಳಿದಂತೆ ತನ್ನ ಇಚ್ಛೆಯಿಂದ ಕನ್ಯಾದಾನಮಾಡುವದರಲ್ಲಿ ದೋಷವೇನೂ ಇಲ್ಲ. ಆದರೂ ಮನುಧರ್ಮಶಾಸ್ತ್ರದ ಆಜ್ಞೆಯು ಭಾರತೀಯರ ಹೃದಯದಲ್ಲಿ ಪ್ರಬಲರೂಪದಿಂದ ಪ್ರಕಾಶಿಸುತ್ತಿದ್ದುದರಿಂದ ಅಂತಹ ಸಂದರ್ಭದಲ್ಲಿಯೂ ಮತ್ತೊಬ್ಬ ವರನಿಗೆ ಸ್ವಭಾವವಾಗಿಯೇ ಕೊಡುತ್ತಿರಲಿಲ್ಲ. ಒಂದು ವೇಳೆ ಹಾಗೆ ಯಾರಾದರೂ ಮಾಡಿದರೆ ಅಂತಹ ಕನ್ಯೆಯನ್ನು ಅನ್ಯ ಪೂರ್ವೆಯೆಂದು ವ್ಯವಹರಿಸುವದರಲ್ಲಿಯೂ ಹಿಂತೆಗೆಯುತ್ತಿರಲಿಲ್ಲ. ಹೀಗಿರುವಾಗ ಪಂ|| ವಿದ್ಯಾಸಾಗರರು ನಾವು ಮನುವಿನಂತೆ ನಡೆಯದೆ ವಸಿಷ್ಠವಚನದಂತೆ ನಡೆಯುತ್ತೇವೆಂದು ಹೇಗೆ ಹೇಳಿದರೋ ಆಶ್ಚರ್ಯವಾಗಿರುವದು. ಇದೂ ಅಲ್ಲದೆ ಕನ್ಯಾಸಂಪ್ರದಾನಾನಂತರದಲ್ಲಿ ಪತಿಯ ಮರಣವಾದರೂ ಆ ಕನ್ಯೆಯು ವಿಧವೆಯಾಗುವದಿಲ್ಲವೆಂದು ವಸಿಷ್ಠರು ಹೇಳಿರುವರಷ್ಟೆ! ಈ ವ್ಯವಹಾರವು ಅಧರ್ಮಪೂರ್ಣವಾದ ಈ ಕಾಲದಲ್ಲಿಯೂ ಕಂಡು ಬರುವದು ಹಾಗಿರಲಿ--ಕೇಳಿಬರುವದು ಇಲ್ಲ. ಆದುದರಿಂದ ಧಾರ್ಮಿಕದ್ವಿಜರಲ್ಲಿ ಇಂತಹ ಉದಾಹರಣವು ದುರ್ಲಭವೇ ಸರಿ.

ಹೀಗೆ ವಿರೋಧ ಸ್ಥಳಗಳಲ್ಲಿ ಇತರ ಧರ್ಮಶಾಸ್ತ್ರಗಳ ಮೂಲಕ ಮನುವಚನಕ್ಕೆ ಎಲ್ಲಿಯೂ ತಿರಸ್ಕಾರವಿಲ್ಲ. ಪ್ರಾಚೀನ ವಿದ್ವಾಂಸರೂ ಅರ್ವಾಚೀನ ವಿದ್ವಾಂಸರೂ ಎಲ್ಲರೂ ಮನುವಚನವನ್ನು ಆದರಿಸುತ್ತಿರುವರು.

" ಮನ್ವರ್ಥವಿಪರೀತಾಯಾ ಸಾಸ್ಮೃತಿರ್ನಪ್ರಶಸ್ಯತೆ " ಮನುವಿಗೆ ವಿರುದ್ಧವಾದ ಯಾವ ಸ್ಮೃತಿಯೂ ಪ್ರಶಂಸೆಗೆ ವಿಷಯವಾಗುವದಿಲ್ಲ.

---

# ಆರನೆಯ ಅಧ್ಯಾಯ.

ಹಿಂದಿನ ಅಧ್ಯಾಯದಲ್ಲಿ ಮನುವಿನ ವ್ಯವಸ್ಥೆಯು ಕಲಿಯುಗದಲ್ಲಿ ಪ್ರಚಾರದಲ್ಲಿರುವದೆಂಬುವದನ್ನೂ ಮನುಧರ್ಮಶಾಸ್ತ್ರಕ್ಕೆ ವಿರುದ್ಧವಾದ ಯಾವ ಧರ್ಮಶಾಸ್ತ್ರವೂ ಮಾನ್ಯವಲ್ಲವೆಂಬುದನ್ನೂ ನಿರೂಪಿಸಿದ್ದಾಯಿತು. ಈಗ ಯಾವ ಲಘುಪರಾಶರ ಸ್ಮೃತಿಯನ್ನು ಕಲಿಯುಗದ ಪ್ರಧಾನಶಾಸ್ತ್ರವೆಂದು ವಿಧವಾ ವಿವಾಹ ಪಕ್ಷದವರು ಉದ್ಘೋಷಿಸುತ್ತಿರುವರೋ ಆ ಲಘುಪರಾಶರ ಸ್ಮೃತಿಯ ವ್ಯವಸ್ಥೆಯು ಇತರ ಧರ್ಮಶಾಸ್ತ್ರಗಳಿಗೆ ವಿರುದ್ಧವಾದ ಭಾಗದಲ್ಲಿ ಕಲಿಯುಗದಲ್ಲಿಯೂ ಸ್ವೀಕರಿಸಲ್ಪಡುವದಿಲ್ಲವೆಂಬಂಶವನ್ನು ತೋರಿಸಿಕೊಡುವೆವು.

ಪರಾಶರ ಸ್ಮೃತಿಯಲ್ಲಿ

"ದನ್ತಜಾತೇಽನುಜಾತೇಚ ಕೃತಚೂಡೆಚಸಂಸ್ಥಿತೇ |
ಅಗ್ನಿಸಂಸ್ಕರಣಂ ತೇಷಾಂ ತ್ರಿರಾತ್ರಂ ಸೂತಕಂ ಭವೇತ್ ‖"

ಹುಟ್ಟುವಾಗಲೇ ಹಲ್ಲಿನೊಂದಿಗೆ ಹುಟ್ಟಿದ ಬಾಲಕನಾಗಲಿ ಹುಟ್ಟಿದ ಮೇಲೆ ಕ್ರಮವಾಗಿ ಹಲ್ಲು ಬಂದ ಬಾಲಕನಾಗಲಿ, ಚೂಡಾಕರ್ಮವು ನೆರವೇರಿದ ಬಾಲಕನಾಗಲಿ, ಮೃತನಾದರೆ ಅಗ್ನಿಸಂಸ್ಕಾರವನ್ನು ಮಾಡಬೇಕು. ಮೂರುರಾತ್ರಿ ಸೂತಕವಿರಬೇಕು. ಎಂದು ಇರುವದು,

ಹುಟ್ಟಿದ ಬಾಲಕನಿಗೆ ಆರುತಿಂಗಳು ಕಳೆದ ಅನಂತರದಲ್ಲಿ ಹಲ್ಲು ಹುಟ್ಟುವದೆಂದು ಎಲ್ಲರೂ ಬಲ್ಲರು. ಆದದರಿಂದ ಪರಾಶರ ವ್ಯವಸ್ಥಾನುಸಾರವಾಗಿ ಹುಟ್ಟುವಾಗಲೇ ಹಲ್ಲಿನೊಂದಿಗೆ ಹುಟ್ಟಿದ ಅಥವಾ ಆರುತಿಂಗಳಿನ ಮೇಲೆ ಹಲ್ಲು ಬಂದ ಬಾಲಕನು ಮೃತನಾದರೆ ಆ ಬಾಲಕನಿಗೆ ಅಗ್ನಿಸಂಸ್ಕಾರವನ್ನು ಮಾಡಬೇಕು.

ಆದರೆ ಮನುಸ್ಮೃತಿಯಲ್ಲಿ

"ಊನದ್ವಿವಾರ್ಷಿಕಂಪ್ರೇತಂ ನಿದಧ್ಯುರ್ಬಾಂಧವಾಬಹಿಃ |
ಅಲಂಕೃತ್ಯಶುಚೌಭೂಮಾವಸ್ಥಿಸಂಚಯನಾದೃತೇ ‖
ನಾಸ್ಯಕಾರ್ಯೋಗ್ನಿಸಂಸ್ಕಾರೊ ನಚಕಾರ್ಯೋದಕಕ್ರಿಯಾ |
ಅರಣ್ಯೇಕಾಷ್ಠವತ್ತ್ಯಕ್ತ್ವಾಕ್ಷಪೇಯುಸ್ತ್ರ್ಯಹಮೇವಚ"

ಎರಡು ವರ್ಷಕ್ಕಿಂತಲೂ ಕಡಮೆಯಾದ ವಯಸ್ಸುಳ್ಳ ಬಾಲಕನು ಮೃತನಾದರೆ ಬಂಧುಗಳು ಶವವನ್ನು ಗ್ರಾಮದ ಹೊರಕ್ಕೆ ತೆಗೆದುಕೊಂಡು ಹೋಗಿ ಅದನ್ನು ಅಲಂ

ಕರಿಸಿ ಭೂಮಿಯಲ್ಲಿ ಖನನಮಾಡಬೇಕು. ಅಸ್ಥಿಸಂಚಯನವಿಲ್ಲ. ಇಂತಹ ಬಾಲಕನಿಗೆ ಅಗ್ನಿಸಂಸ್ಕಾರವಿಲ್ಲ. ಜಲದಾನ ಪಿಂಡದಾನಗಳಿಲ್ಲ. ಮೇಲೆ ಹೇಳಿದಂತೆ ಕಾಡಿನಲ್ಲಿ ಒಟ್ಟು ಮೂರುರಾತ್ರಿ ಆಶೌಚವಿರಬೇಕು, ಎಂದಿರುವದು.

ಪರಾಶರರ ಮತದಲ್ಲಿ ಹಲ್ಲು ಹುಟ್ಟಿದ್ದರೆ ಅಥವಾ ಆರುತಿಂಗಳುಗಳು ಕಳೆದಿದ್ದರೆ ಅಂತಹ ಬಾಲಕನ ಮರಣದಲ್ಲಿ ಅಗ್ನಿಸಂಸ್ಕಾರವನ್ನು ಮಾಡಬೇಕು.

ಮನುವಿನ ಮತದಲ್ಲಿ ಎರಡುವರ್ಷಗಳು ತುಂಬದೆ ಇದ್ದರೆ ಅಥವಾ ಚೂಡಾಕರ್ಮವಾಗದೆ ಇದ್ದರೆ ಈ ಮಧ್ಯದಲ್ಲಿ ಬಾಲಕನ ಮರಣವಾದರೆ ಅಗ್ನಿಸಂಸ್ಕಾರವನ್ನು ಮಾಡಕೂಡದು.

ಈಗ ಪರಾಶರರ ಮತದಂತೆ ನಡಿಯುವದಿಲ್ಲ. ಮನುವಿನ ಮತದಂತೆಯೇ ನಡೆಯುವರು. ಈ ವಿಷಯದಲ್ಲಿ ಮನುವಿಗೆ ವಿರುದ್ಧವಾದುದರಿಂದ ಪರಾಶರರ ವ್ಯವಸ್ಥೆಯು ಮಾನ್ಯವಾಗಲಿಲ್ಲ.

ಸಂಸರ್ಗದೋಷದಿಂದುಂಟಾದ ಪಾಪದ ಪ್ರಾಯಶ್ಚಿತ್ತದ ವ್ಯವಸ್ಥೆಯಲ್ಲಿ

"ಆಸನಾಚ್ಛಯನಾ ದ್ಯಾನಾತ್ಸಂಭಾಷಾತ್ಸಹಭೋಜನಾತ್ |
ಸಂಕ್ರಾಮನ್ತಿಹಿ ಪಾಪಾನಿ ತೈಲಬಿಂದುರಿವಾಂಭಸಿ ||"

ನೀರಿನಲ್ಲಿ ಎಣ್ಣೆಯು ಒಂದು ತೊಟ್ಟು ಬಿದ್ದರೆ ಕ್ರಮವಾಗಿ ಹರಡಿಕೊಂಡು ನೀರನ್ನೆಲ್ಲವನ್ನೂ ಆವರಿಸಿಕೊಳ್ಳುವಂತೆ ಪಾತಕಿಯೊಂದಿಗೆ ಒಂದು ಕಡೆ ಮಲಗುವದರಿಂದಲೂ ಒಟ್ಟಿಗೆ ಪ್ರಯಾಣ ಮಾಡುವದರಿಂದಲೂ ಪರಸ್ಪರ ಮಾತಾಡುವದರಿಂದಲೂ ಭೋಜನ ಮಾಡುವದರಿಂದಲೂ ಪಾತಕಿಯ ಪಾಪವು ಬಂದು ಶರೀರದಲ್ಲೆಲ್ಲವೂ ವ್ಯಾಪಿಸಿಕೊಳ್ಳುವದು, ಎಂದು ಪರಾಶರ ಸ್ಮೃತಿಯಲ್ಲಿರುವದು.

ಈ ಪರಾಶರ ವಚನದಿಂದ ಕೆಲವು ಕಾಲದ ವರೆಗೂ ಪಾಪಮಾಡಿದವನೊಂದಿಗೆ ಮಲಗುವದನ್ನೂ, ಭೋಜನವನ್ನೂ, ಮಾತಾಡುವದನ್ನೂ, ಪ್ರಯಾಣವನ್ನೂ, ಮಾಡಿದರೆ ಪತಿತನಿಗೆ ಸಮನಾಗುವ ಸಂಭವವುಂಟು ಎಂದು ತೋರುವದು. ಆದರೆ ಎಷ್ಟು ಕಾಲದವರೆಗೆ ಸಂಸರ್ಗವಾದರೆ ಪಾಪಸಂಚಾರವಾಗುವದೆಂಬಂಶವನ್ನು ಪರಾಶರರು ಸ್ಪಷ್ಟಪಡಿಸಲಿಲ್ಲ. ಇತರ ಶಾಸ್ತ್ರಕಾರರು ಅದನ್ನು ಸ್ಪಷ್ಟವಾಗಿ ಹೇಳಿರುವರು. ಮನುಸ್ಮೃತಿಯಲ್ಲಿ

ಸಂವತ್ಸರೇಣಪತತಿ ಪತಿತೇನ ಸಹಾಚರನ್ |
ಯಾಜನಾಧ್ಯಾಪನಾದ್ಯಾನಾನ್ನತುಯಾನಾಸನಾಶನಾತ್ |

ಪತಿತನೊಂದಿಗೆ ಯಜ್ಞಮಾಡಿಸುವುದು ಅಧ್ಯಯನ ಮಾಡಿಸುವುದು, ಸಂಬಂಧವನ್ನು ಬೆಳಿಸುವದು, ಈ ಸಂಸರ್ಗಗಳಿಂದ ಶೀಘ್ರವಾಗಿಯೇ ಪತಿತನಾಗುವನು. ಪತಿತನೊಂದಿಗೆ ಪ್ರಯಾಣಮಾಡುವದು, ಕೂತುಕೊಳ್ಳುವುದು, ಭೋಜನ ಮಾಡುವುದು, ಈ ವಿಧವಾದ ಸಂಸರ್ಗವಾದರೆ ಒಂದು ವರ್ಷದಲ್ಲಿ ಪತಿತನಾಗುವನು, ಎಂದು ಹೇಳಿರುವುದು.

ದೇವಲ ಸ್ಮೃತಿಯಲ್ಲಿ

ಯಾಜನಂಯೋನಿ ಸಂಬಂಧಂ ಸ್ವಾಧ್ಯಾಯಂ ಸಹಭೋಜನಂ |
ಕೃತ್ವಾಸದ್ಯಃ ಪತತ್ಯೇತೆ ಪತಿತೇನ ನ ಸಂಶಯಃ |

ಪತಿತನೊಂದಿಗೆ ಯಜ್ಞವನ್ನು ಮಾಡಿಸುವುದು. ಯೋನಿಸಂಬಧವನ್ನು ಬೆಳೆಸುವುದು, ಅಧ್ಯಾಯನಮಾಡುವುದು, ಸಹಭೋಜನವನ್ನು ಮಾಡುವುದು ಇವುಗಳಿಂದ ತತ್ಕಾಲದಲ್ಲಿಯೇ ಸಂದೇಹವಿಲ್ಲದೆ ಪತಿತನಾಗುವನೆಂದು ಹೇಳಿರುವುದು ಕುಲ್ಲೂಕ ಭಟ್ಟರು ತಮ್ಮ ವ್ಯಾಖ್ಯಾನದಲ್ಲಿ ವಿಷ್ಣುವಚನವನ್ನು ಉದಹರಿಸಿರುವರು. ಅದರಲ್ಲಿ

ಆಸಂವತ್ಸರಾತ್ಪತತಿ ಪತಿತೇನ ಸಹಾಚರ್ನ್ |
ಸಹಯಾನಾಸನಾಭ್ಯಾಸಾತ್ ಯೌನಾತ್ತು ಸದ್ಯತಾವಿವಹಿ |

ಪತಿತನೊಂದಿಗೆ ಪ್ರಯಾಣಮಾಡುವುದು ಕೂತುಕೊಳ್ಳುವುದು ಶಾಸ್ತ್ರಾಭ್ಯಾಸ ಮಾಡುವುದು. ಇವುಗಳಿಂದ ಒಂದು ವರ್ಷದಲ್ಲಿ ಪತಿತನಾಗುವನು. ಯೋನಿ ಸಂಬಂಧವನ್ನು ಮಾಡುವುದರಿಂದ ತಕ್ಷಣವೇ ಪತಿತನಾಗುವನು.

ವಿಷ್ಣುಸ್ಮೃತಿಯ ಮುವತ್ತಾರನೇ ಅಧ್ಯಾಯದಲ್ಲಿ

"ಬ್ರಹ್ಮಹತ್ಯಾ, ಸುರಾಪಾನಂ, ಬ್ರಾಹ್ಮಣ ಸುವರ್ಣಹರಣಂ |
ಗುರುದಾರಗಮನಮಿತಿ ಮಹಾಪಾತಕಾನಿ ತತ್ಸಂಯೋಗಶ್ಚ |
ಸಂವತ್ಸರೇಣ ಪತತಿ ಪತಿತೇನ ಸಹಾಚರ್ನ್ |
ಏಕಯಾನ ಭೋಜನಾಸನ ಶಯನೈ ಯೌನಸ್ರಾವಣ ಮುಖಸಂಬಂಧಾತ್ಸಧ್ಯವಿವ |

ಬ್ರಹ್ಮಹತ್ಯೆ, ಮದ್ಯಪಾನ, ಬ್ರಾಹ್ಮಣ ಸುವರ್ಣವನ್ನು ಕದಿಯುವುದು, ಗುರು ಸ್ತ್ರೀಗಮನ, ಮತ್ತು ಇವರ ಸಂಸರ್ಗ ಇವೆಲ್ಲವೂ ಮಹಾಪಾತಕಗಳು. ಪತಿತನೊಂದಿಗೆ ಪ್ರಯಾಣ, ಭೋಜನ, ಶಯನ, ಕೂತುಕೊಳ್ಳುವುದು. ಇವುಗಳನ್ನು ಮಾಡಿದರೆ ಒಂದು ವರ್ಷದಲ್ಲಿ ಪತಿತನಾಗುವನು. ಯೋನಿ ಸಂಬಂಧದಿಂದಲೂ

ಯಜನ ಸಂಬಂಧದಿಂದಲೂ ಪತನ ಸಂಬಂಧದಿಂದಲೂ ತತ್ಕಾಲದಲ್ಲಿಯೇ ಪತಿತನಾಗುವನು. ಎಂದಿರುವುದು. ಬೋಧಾಯನ ಸ್ಮೃತಿಯಲ್ಲಿ

ಸಂವತ್ಸರೇಣ ಪತತಿ ಪತಿತೇನ ಸಹಾಚರನ್
ಯಾಜನಾಧ್ಯಾಪನಾದ್ಯೌನಾತ್ಸದ್ಯೋ ನಶಯನಾಸನಾತ್ ||

ಎಂದು ಇರುವುದು. ಇತ್ಯಾದಿ ವಚನಗಳಿಂದ ಯಾವ ಸಂಸರ್ಗಗಳ ಮೂಲಕ ಶೀಘ್ರದಲ್ಲಿಯೇ ಪತಿತನಾಗುವ ವಿಧಿಯು ಇರುವದೋ ಅವುಗಳ ವರ್ಣನವನ್ನು ಪರಾಶರರು ಮಾಡದೆ ಯಾವ ಸಂಸರ್ಗಗಳಿಂದ ಒಂದು ವರ್ಷದಲ್ಲಿ ಪಾಪವು ಹರಡಿ ಸಂಸರ್ಗಿಯು ಪತಿತನಾಗುವನೋ ಆ ಸಂಸರ್ಗಗಳೆಲ್ಲದರ ಹೆಸರನ್ನೂ ಹೇಳಿ ಎಷ್ಟು ಕಾಲದಲ್ಲಿ ಪತಿತನಾಗುವನೆಂಬ ವಿಷಯದಲ್ಲಿ ನೀರನಲ್ಲಿ ಬಿದ್ದ ತೈಲಬಿಂದುವಿನ ದೃಷ್ಟಾಂತವನ್ನು ಕೊಟ್ಟಿರುವರು. ಪರಾಶರರ ವಚನಕ್ಕೆ ಸಹಜವಾಗಿ ತೋರುವ ಅರ್ಥವನ್ನು ತೆಗೆದುಕೊಂಡರೆ ಹಿಂದೆ ಉದಹರಿಸಿದ ಮುನಿವಚನಗಳೊಳಗೆ ಯಾವುದಕ್ಕೂ ವಿರೋಧವಿರುವುದಿಲ್ಲ. ಸಮನ್ವಯವಾಗುತ್ತದೆ. ಆದರೆ ವಿದ್ಯಾಸಾಗರರು ಪ್ರಾಚೀನ ಸಂಪ್ರದಾಯದ ಪಥಿಕರಲ್ಲ. ಅವರು

ತ್ಯಜೇದ್ದೇಶಂ ಕೃತಯುಗೇ ತ್ರೇತಾಯಾಂ ಗ್ರಾಮಮುತ್ಸೃಜೇತ್ |
ದ್ವಾಪರೇಕುಲಮೇಕಸ್ತು ಕರ್ತಾರಂತು ಕಲೌಯುಗೇ |
ಕೃತೇಸಂಭಾಷಣಾತ್ಪಾಪಂ ತ್ರೇತಾಯಾಂ ಚೈವದರ್ಶನಾತ್ |
ದ್ವಾಪರೇಚಾನ್ನ ಮಾದಾಯ ಕಲೌಪತತಿ ಕರ್ಮಣಾ ||

ಪರಾಶರರು ಹೇಳಿದ ಅಥವಾ ಅವರ ಉಪದೇಶವನ್ನು ಸಂಗ್ರಹಿಸಿದವರು ಮಾಡಿದ ಈ ಎರಡು ಶ್ಲೋಕಗಳಿಗೆ ಕೃತಯುಗದಲ್ಲಿ ಯಾವ ದೇಶದಲ್ಲಿ ಪಾಪಮಾಡಿದವರು ಇದ್ದರೋ ಆ ದೇಶವನ್ನು ತ್ಯಾಗಮಾಡಬೇಕೆಂಬ ವಿಧಿಯು ಇದ್ದಿತು. ತ್ರೇತಾಯುಗದಲ್ಲಿ ಪಾಪಿಯು ವಾಸಮಾಡುತ್ತಿದ್ದ ಗ್ರಾಮವನ್ನು ಬಿಡುವ ವಿಧಿಯು ಇದ್ದಿತು. ದ್ವಾಪರದಲ್ಲಿ ಪಾಪಿಯ ಕುಲವನ್ನು ತ್ಯಾಗಮಾಡುವ ವಿಧಿಯು ಇದ್ದಿತು. ಕಲಿಯುಗದಲ್ಲಿ ಪಾಪಿಯನ್ನು ಮಾತ್ರ ತ್ಯಾಗಮಾಡುವ ವಿಧಿಯು ಇರುವುದು. ಕೃತಯುಗದಲ್ಲಿ ಪತಿತನೊಂದಿಗೆ ಮಾತನ್ನು ಆಡಿದರೂ ಪತಿತನಾಗುತ್ತಿದ್ದನು. ತ್ರೇತಾಯುಗದಲ್ಲಿ ಪತಿತನೊಂದಿಗೆ ದರ್ಶನ ವ್ಯವಹಾರದಿಂದಲೂ, ದ್ವಾಪರದಲ್ಲಿ ಪತಿತನ ಅನ್ನವನ್ನು ಊಟಮಾಡುವುದರಿಂದಲೂ ಪತಿತರಾಗುತ್ತಿದ್ದರು. ಕಲಿಯುಗದಲ್ಲಿ ಪಾಪವನ್ನು ಮಾಡಿದವನು ಮಾತ್ರ ಪತಿತನಾಗುವನೆಂಬ ವಿಧಿಯು ಇರುವುದು ಎಂದು ಅರ್ಥಮಾಡಿ, ಆದುದರಿಂದ "ಆಸನಾಚ್ಛಯನಾದ್ಯಾನಾತ್",

ಇತ್ಯಾದಿ ಪರಾಶರರ ವಚನವನ್ನು ಪಾಲಿಸುವುದರಲ್ಲಿ ಸಾಮರ್ಥ್ಯವಿಲ್ಲದೆ ಪತಿತನ ಸಂಸರ್ಗದಿಂದ ಕಲಿಯುಗದಲ್ಲಿ ಪತಿತನಾಗುವದಿಲ್ಲ, ಎಂದು ಹೇಳಿಬಿಟ್ಟರು. ಅಲ್ಲದೆ ಪತಿತನ ಸಹವಾಸದಿಂದ ಅಲ್ಪಸ್ವಲ್ಪ ಪಾಪದ ಸ್ಪರ್ಶವಾಗುವುದು ಎಂತಲೂ ಹೇಳಿರುವರು. ಆದರೆ ಪರಾಶರರ ವಚನವಲ್ಲಿ ಸ್ವಲ್ಪ ಪಾಪಸ್ಪರ್ಶವಾಗುವುದೆಂಬ ಅಭಿಪ್ರಾಯವು ಎಲ್ಲಿಯೂ ಇರುವುದಿಲ್ಲ. ಒಂದು ರೋಗವನ್ನು ಸಾಂಕ್ರಾಮಿಕರೋಗವೆಂದು ಹೇಳಿದರೆ ಆ ರೋಗಿಯ ಸಂಸರ್ಗವನ್ನು ಮಾಡಿದವನು ಆ ರೋಗಕ್ಕೆ ತುತ್ತಾಗುವನು, ಎಂದು ನಾವು ತಿಳಿಯುತ್ತೇವೆ. ಅಲ್ಲದೆ ಈ ರೋಗವು ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಸ್ವಭಾವವಾಗಿಯೇ ಪ್ರವೇಶಮಾಡುವದೆಂದೂ ತಿಳಿಯುತ್ತೇವೆ. ಸ್ವಲ್ಪಮಾತ್ರ ಪ್ರವೇಶಮಾಡುತ್ತದೆ. ಆದ್ದರಿಂದ ಸ್ವಲ್ಪ ಸ್ಪರ್ಶಮಾಡಬಹುದು ಎಂದು ತಿಳಿಯುವುದಿಲ್ಲ.

ಪರಾಶರರ ಅಭಿಪ್ರಾಯವು ಹೀಗೆ ಇರುವುದಾದರೆ ಸಂಸರ್ಗ ಮಾಡಿದವನ ಶರೀರದಲ್ಲಿ ಇಷ್ಟು ಪಾಪವು ಸೇರುವದೆಂದು ಹೇಳುತಿದ್ದರು. ಅದಕ್ಕೆ ಪ್ರಾಯಶ್ಚಿತ್ತವನ್ನೂ ವಿವರಿಸುತ್ತಿದ್ದರು. ಪರಾಶರರು ಹಾಗೆ ಹೇಳಲಿಲ್ಲ. ಯಾವ ಪ್ರಾಯಶ್ಚಿತ್ತದಿಂದ ಶುದ್ಧಿಯು ಆಗಬೇಕೊ ಅದನ್ನು ಹೇಳಿ ಇಲ್ಲ. ಆದುದರಿಂದ ಪ್ರಾಚೀನರಾದ ಋಷಿಗಳು ಹೇಳಿರುವಂತೆಯೇ ಪತಿತನ ಸಂಸರ್ಗವನ್ನು ಮಾಡಿದವನಿಗೂ ಪ್ರಾಯಶ್ಚಿತ್ತವನ್ನು ಒಪ್ಪಬೇಕಾಗಿದೆ.

ಸಮಯಾನುಸಾರವಾಗಿ ಜನಗಳಿಗೆ ಧರ್ಮದ ವಿಷಯದಲ್ಲಿ ಎಂತಹ ವ್ಯತ್ಯಾಸವು ಉಂಟಾಗುವದೆಂಬಂಶವನ್ನು ಪರಾಶರರು ಮೇಲಿನ ಶ್ಲೋಕಗಳಿಂದ ತೋರಿಸಿರುವರು. ಕಲಿಯುಗದಲ್ಲಿ ಪಾಪಮಾಡಿದವನು ಮಾತ್ರವೇ ಪತಿತನಾಗುವದರಿಂದ ಪ್ರಾಯಶ್ಚಿತ್ತಕ್ಕೆ ಯೋಗ್ಯನಾದ ಪತಿತನೊಂದಿಗೆ ಯಾವ ವಿಧವಾದ ಸಂಸರ್ಗವನ್ನು ಮಾಡಿದರೂ ಹಾಗೆ ಮಾಡಿದವನು ಪತಿತನಾಗುವದಿಲ್ಲ, ಎಂದು ಎಲ್ಲಿಯೂ ಹೇಳಲಿಲ್ಲ. ಆದುದರಿಂದ 'ಆಸನಾಚ್ಛಯನಾದ್ಯಾನಾತ್' ಮೊದಲಾದ ವಚನಗಳಿಗೆ ಬಾಧಕವೇನೂ ಇರುವದಿಲ್ಲ. 'ಕೃತೇಸಂಭಾಷಣಾತ್ಪಾಪಂ' ಮೊದಲಾದ ವಚನಗಳು ವಿಧಿ ಬೋಧಕಗಳೆಂದು ಪರಾಶರರ ಅಭಿಪ್ರಾಯವಾಗಿದ್ದರೆ ವಿದ್ಯಾಸಾಗರರು ಹೇಳಿದಂತೆ ಕೃತಯುಗದಲ್ಲಿ ಪತಿತನೊಂದಿಗೆ ಮಾತನಾಡುವದರಿಂದಲೂ, ತ್ರೇತಾಯುಗದಲ್ಲಿ ದರ್ಶನ ವ್ಯವಹಾರವನ್ನು ಮಾಡುವದರಿಂದಲೂ, ಪತಿತರಾಗಬೇಕಾಗುವದೆಂದು ತಿಳಿಯಬಹುದಾಗಿದ್ದಿತು. ಮತ್ತು ವಿದ್ಯಾಸಾಗರರ ಮತದಲ್ಲಿ ಮನುಸ್ಮೃತಿಯು ಕೃತಯುಗದ ಧರ್ಮಶಾಸ್ತ್ರವಾಗಿಯೂ ಇರುವದರಿಂದ

ಮನುಸ್ಮೃತಿಯಲ್ಲಿ ಪತಿತನೊಂದಿಗೆ ಸಂಭಾಷಣ ಮಾಡಿದವನು ಪತಿತನಾಗುವನೆಂತಲೂ ಬರೆದಿರಬೇಕಾಗಿತ್ತು. ಮತ್ತು ಅದರ ಪ್ರಾಯಶ್ಚಿತ್ತವನ್ನೂ ಆ ಸ್ಮೃತಿಗಳಲ್ಲಿ ಬರೆದಿರಬೇಕಾಗಿತ್ತು. ಆದರೆ ಮನುವಚನವನ್ನು ಹಿಂದೆಯೇ ಬರೆದಿರುತ್ತೇವೆ. ಮನುವು ಒಂದಿಗೆ ಸಂಚರಿಸುವದು ಒಂದಿಗೆ ಕೂರುವದು ಮೊದಲಾದವುಗಳನ್ನು ಒಂದು ವರ್ಷದವರಿಗೂ ಮಾಡಿದರೆ ಪತಿತನಾಗುವನೆಂದು ಹೇಳಿರುವನು. ಪತಿತನೊಂದಿಗೆ ದರ್ಶನ ವ್ಯವಹಾರವನ್ನು ಮಾಡಿದರೆ ಪತಿತನಾಗುವನೆಂದು ಗಾತಮರೂ ತಮ್ಮ ಸ್ಮೃತಿಯಲ್ಲಿ ಎಲ್ಲಿಯೂ ಹೇಳಿ ಇಲ್ಲ. ಮನುವಿನಂತೆಯೇ ಅವರೂ ಹೇಳಿರುವರು. ಗಾತಮಸ್ಮೃತಿಯು 22ನೇ ಅಧ್ಯಾಯದಲ್ಲಿ,

"ಪತಿತಾಃ ಪಾತಕಸಂಯೋಗಾಶ್ಚ ತೈಶ್ಚಾಬ್ದಂ ಸಮಾಚರನ್ ||"

ಪತಿತನೊಂದಿಗೆ ಒಂದು ವರ್ಷದವರೆಗೆ ಸಮಾಗಮ ಮಾಡುವದರಿಂದ ಪಾತಕದ ಸಂಬಂಧವುಂಟಾಗಿ ಪತಿತನಾಗುವನು, ಎಂದು ಹೇಳಿರುವದು. ವಿದ್ಯಾಸಾಗರರ ವ್ಯವಸ್ಥೆಯನ್ನು ಒಪ್ಪುವುದಾದರೆ ಪರಾಶರರ ಮತದಂತೆಯೇ ನಾವು ನಡಿಯುವದಿಲ್ಲ, ಮೇಲೆ ಹೇಳಿದ ಋಷಿಗಳ ಉಪದೇಶಾನುಸಾರವಾಗಿ ನಡೆಯುತ್ತೇವೆ ಎಂದು ಹೇಳಬೇಕಾಗುವದು. ಪರಸ್ತ್ರೀಗಾಮಿಯ ವಿಷಯದಲ್ಲಿ ಸ್ಕಂದಪುರಾಣದಲ್ಲಿ

"ಏತೈಸ್ಸಹಸಮಾಯೋಗಂ ಯಃ ಕರೋತಿದಿನೇದಿನೇ |
ತುಲ್ಯತಾಂಯಾತಿ ವಿಪ್ರೇಸ್ದ್ರ ಕಲೌ ಸಂವತ್ಸರೇಗತೇ"

ಇವರೊಂದಿಗೆ ಪ್ರತಿದಿನವೂ ಸಂಸರ್ಗವನ್ನು ಮಾಡಿದವನು ಕಲಿಯುಗದಲ್ಲಿ ಒಂದು ವರ್ಷದಲ್ಲಿ ಅವರಿಗೆ ಸಮನಾಗುವನು. ಎಂದು ಹೇಳಿರುವದು ಪ್ರಾಯಶ್ಚಿತ್ತವಿವೇಕದಲ್ಲಿ

"ವ್ರತಂ ದ್ವಾದಶವಾರ್ಷಿಕಾದತಿರಿಕ್ತಕಾಲಿಕಂ ನ ಭವತಿ ಯಚ್ಚ ಯಾವಜ್ಜೀವವ್ರತಂ ತದಪಿದ್ವಾದಶವಾರ್ಷಿಕದ್ವೈಗುಣ್ಯೇನ ಕಲ್ಪಿತಂ, ಅನ್ಯಥಾ ತತ್ಸಂಸರ್ಗಿಣೋ ಜೀವನಕಾಲಾನಿಯತತ್ವೇನ ಪ್ರಾಯಶ್ಚಿತ್ತಕಲ್ಪನಾನಹ್ನೈವಸೋಯಾಪತ್ತೇಃ"

ಯಾವ ವ್ರತವೂ ಹನ್ನೆರಡು ವರ್ಷಕ್ಕಿಂತ ಹೆಚ್ಚಿನ ಕಾಲದ್ದಾಗಿರುವುದಿಲ್ಲ. ಆವುದಾದರೂ ಒಂದು ಪಾಪದ ಪ್ರಾಯಶ್ಚಿತ್ತಕ್ಕಾಗಿ ಜೀವಿತಾವಧಿ ವ್ರತವನ್ನಾಚರಿಸಬೇಕಾದ ವಿಧಿಯು ಇದ್ದರೆ ಅಂತಹ ಪಾಪವನ್ನು ಮಾಡಿದವನ ಸಂಸರ್ಗದಲ್ಲಿದ್ದವನೂ ಸಹ ಶಾಸ್ತ್ರಾನುಸಾರವಾಗಿ ಮೂಲಪಾಪಿಯ ಜೀವಿತಕಾಲದ ವರಿಗೂ ವ್ರತವನ್ನಾಚರಿಸಬೇಕಾಗುವದು. ಮೂಲಪಾಪಿಯು ಜೀವಿಸಿ ಇರುವವರಿಗೂ

ಸಂಸರ್ಗ ಮಾಡಿದವನು ಬದುಕಿರುವನೆಂಬ ಭರವಸೆಯು ಇರುವುದಿಲ್ಲ. ಯಾವ ಪುರುಷನ ಜೀವಿತಕಾಲವೂ ಇಷ್ಟೇ ಸರಿ ಎಂದು ನಿಯತವಾಗಿರುವುದಿಲ್ಲ. ಆದುದರಿಂದ ಅವನ ಸಂಸರ್ಗವನ್ನು ಮಾಡಿದವನ ವ್ರತಾಚರಣಕ್ಕೆ ಒಂದು ಕಾಲದ ನಿರ್ಣಯವಾಗುವದಿಲ್ಲ. ಅದರ ನಿರ್ಣಯವಾಗಬೇಕಾಗಿದೆ. ಆದುದರಿಂದಲೇ ಮೂಲ ಪಾಪಿಗೆ ಹನ್ನೆರಡು ವರ್ಷಗಳ ಎರಡರಷ್ಟಿನ ಇಪ್ಪತ್ತನಾಲ್ಕು ವರ್ಷಗಳ ಕಾಲವು ನಿಶ್ಚಯಿಸಲ್ಪಟ್ಟಿದೆ. ಆದುದರಿಂದ ಸಂಸರ್ಗಿಯೂ ಸಹ ಅಷ್ಟುಕಾಲದ ವ್ರತವನ್ನು ಮಾಡಬೇಕು. ಏಕೆಂದರೆ ಮನುಸ್ಮೃತಿಯಲ್ಲಿ

"ಯೋಯೇನಪತಿತೇನೈಷಾಂ ಸಂಸರ್ಗಂ ಯಾತಿಮಾನವಃ |
ಸತಸ್ಯೈವವ್ರತಂ ಕುರ್ಯಾತ್ ತತ್ಸಂಸರ್ಗವಿಶುದ್ಧಯೇ ||

ಪತಿತನೊಂದಿಗೆ ಒಂದುವರ್ಷ ಕಾಲದವರಿಗೆ ಆಸನಭೋಜನಾದಿ ಸಂಸರ್ಗವನ್ನು ಮಾಡಿದವನು ಆ ದೋಷಪರಿಹಾರಕ್ಕಾಗಿ ಮೂಲಪಾಪಿಗೆ ಹೇಳಿರುವಷ್ಟು ಕಾಲದ ವರೆಗೆ ಸಂಸರ್ಗಿಯೂ ಕೂಡ ವ್ರತಾನುಷ್ಠಾನವನ್ನು ಮಾಡಬೇಕು, ಎಂದು ಹೇಳಿರುವುದರಿಂದ ಈ ವಚನವನ್ನನುಸರಿಸಿ ಪ್ರಾಯಶ್ಚಿತ್ತ ವಿವೇಕಕಾರರು ಬರೆದಿರುವರು.

ಹೀಗೆ ಪರಸ್ಪರವಾಗಿ ಪರಾಶರ ಸ್ಮೃತಿಗೂ ಇತರ ಸ್ಮೃತಿಗಳಿಗೂ ವಿರೋಧವುಂಟಾಗುವಂತೆ ವಿದ್ಯಾಸಾಗರರು ಸ್ವೇಚ್ಛೆಯಾಗಿ ಸಿದ್ಧಾಂತವನ್ನು ಮಾಡಿರುವರು. ಇವರ ಸಿದ್ಧಾಂತವನ್ನು ಸರಿಯಲ್ಲವೆಂದು ದೂರಮಾಡಿದರೆ ಯಾವ ಸ್ಮೃತಿಗೂ ಪರಾಶರ ಸ್ಮೃತಿಯೊಂದಿಗೆ ವಿರೋಧವು ಬರುವುದಿಲ್ಲ. ಹಾಗಿಲ್ಲದೆ ವಿದ್ಯಾಸಾಗರರ ಸಿದ್ಧಾಂತವನ್ನು ಸರಿಯೆಂದು ಒಪ್ಪುವುದಾದರೆ ಪರಾಶರ ವಚನವನ್ನು ಇತರ ಸ್ಮೃತಿಗಳಿಗೆ ವಿರುದ್ಧವಾಗಿರುವ ಕಾರಣ ಸ್ವೀಕರಿಸಬಾರದೆಂದು ಪ್ರಾಯಶ್ಚಿತ್ತ ವಿವೇಕಕಾರರು ಸಿದ್ಧಾಂತಮಾಡಿರುವರೆಂದು ಹೇಳಬೇಕಾಗುವುದು. ಅಲ್ಲದೆ ನಾವು ಪರಾಶರರ ವ್ಯವಸ್ಥೆಯಂತೆ ನಡೆಯದೆ ಇತರ ಸ್ಮೃತಿಕಾರರ ಸಿದ್ಧಾಂತದಂತೆಯೇ ನಡೆಯುತ್ತಲಿದ್ದೇವೆ ಎಂತಲೂ ಹೇಳಬೇಕಾಗುವುದು. ಆದುದರಿಂದ ಇತರ ಸ್ಮೃತಿಗಳಿಗೆ ವಿರೋಧವು ಬಾರದಂತೆ ಅರ್ಥಮಾಡುವ ನ್ಯಾಯವಾದ ಉಪಾಯವಿದ್ದರೂ ಅದನ್ನು ಬಿಟ್ಟು ಸ್ವೇಚ್ಛೆಯಾಗಿ ಅರ್ಥಮಾಡಿ ವಿರೋಧವನ್ನು ತಂದುಹಾಕುವುದು ಸರಿಯಲ್ಲ.

ಹೀಗೆ ಪರಾಶರ ಸ್ಮೃತಿಯಾಗಲಿ ಇತರ ಸ್ಮೃತಿಗಳಾಗಲಿ ಮನುಸ್ಮೃತಿಗೆ ವಿರುದ್ಧವಾದ ಭಾಗದಲ್ಲಿ ಆದರಿಸಲ್ಪಡುವದಿಲ್ಲ. ನಮ್ಮ ಈಗಿನ ಆಚಾರ ವ್ಯವಹಾರಗಳೆ

ಲ್ಲವೂ ಮನುಸ್ಮೃತಿಗೆ ಅನುಸಾರವಾಗಿಯೇ ಇವೆ. ಯಾವ ಭಾಗದಲ್ಲಿಯಾದರೂ ಇತರ ಧರ್ಮಶಾಸ್ತ್ರಗಳು ಮನುಸ್ಮೃತಿಗೆ ವಿರುದ್ಧವಾಗಿದ್ದ ಪಕ್ಷದಲ್ಲಿ ಅದು ಆದರಕ್ಕೆ ಯೋಗ್ಯವಾಗುವದಿಲ್ಲ. ಇದನ್ನು ವಿದ್ಯಾಸಾಗರರೂ ಬಲ್ಲರು. ಆದುದರಿಂದಲೇ ಅವರು 'ವಿಧವಾವಿವಾಹವು ಮನುವಿಗೆ ವಿರುದ್ಧವಲ್ಲವೆಂದು ಸಾಧಿಸುವದಕ್ಕೂ ತಮ್ಮ ಪುಸ್ತಕದಲ್ಲಿ ಪ್ರಯತ್ನವನ್ನು ಮಾಡಿರುವರು. ಹಾಗಿಲ್ಲದೆ ಮನುವಿಗೆ ವಿರುದ್ಧವಾದರೂ ಪರಾಶರರ ಮತವೇ ಕಲಿಯುಗಕ್ಕೆ ಮುಖ್ಯವಾದುದು. ಎಂಬುದು ಅವರ ಹೃದಯದಲ್ಲಿ ನಿಶ್ಚಯವಾಗಿರುತ್ತಿದ್ದರೆ ಪರಾಶರರ ಮತದಂತೆ ವಿಧವಾವಿವಾಹವನ್ನು ಸಿದ್ಧಮಾಡಿ ತೋರಿಸಿದ ಮೇಲೆ ಮನುವಿಗೆ ವಿರುದ್ಧವೆಂದಾಗಲಿ ಅನುಕೂಲವೆಂದಾಗಲಿ ಹೇಳಬೇಕಾದ ಆವಶ್ಯಕತೆಯೇ ಇರಲಿಲ್ಲ.

ಮನುಮತಕ್ಕೆ ವಿರುದ್ಧವಾದ ಮೇಲೆ ಪರಾಶರ ಸ್ಮೃತಿಯ ವ್ಯವಸ್ಥೆಯನ್ನು ಮಾತ್ರ ಇಟ್ಟುಕೊಂಡು ವಿಧವಾವಿವಾಹವು ಸ್ಮೃತಿಸಮ್ಮತವೆಂದು ಸಾಧಿಸಿದರೆ ನಮ್ಮ ಮಾತನ್ನು ಯಾರೂ ಲಕ್ಷ್ಯಮಾಡುವುದಿಲ್ಲ. ನಮ್ಮ ಪ್ರಯೋಜನವೂ ಸಿದ್ಧವಾಗುವುದಿಲ್ಲ, ಎಂದು ಅವರು ತಿಳಿದುಕೊಂಡಿದ್ದರು. ಅದಕ್ಕಾಗಿ ವಿಧವಾವಿವಾಹವು ಮನುವಿಗೆ ವಿರುದ್ಧವಲ್ಲವೆಂದು ಸಾಧಿಸುವುದಕ್ಕೂ ಪ್ರಯತ್ನಮಾಡಿದರು. ಆದರೆ ಹಾಗೆ ಮಾಡುವದಕ್ಕೆ ಮೊಗವಾಡದ ಹುಲಿಯಂತೆ ವಾಗಾಡಂಬರವನ್ನು ಮಾತ್ರ ಮಾಡಿರುವರು.

ಮುಂದೆ ಬರೆಯುವ ಪ್ರಮಾಣಗಳನ್ನು ಪರಿಶೀಲಿಸುವದರಿಂದ ಮನುಸ್ಮೃತಿಯ ಮನೋಹರವಾದ ಲೇಖನಗಳಿಗೆ ವಿದ್ಯಾಸಾಗರರು ಪದಪದಕ್ಕೂ ಬೇರೆವಿಧವಾದ ಬಣ್ಣವನ್ನು ಬಳಿದು ಜನಗಳ ಮುಂದೆ ಇಟ್ಟಿರುವರೆಂಬುದೂ ಹೀಗೆ ಬರೆಯುವ ಇವರ ಬರವಣಿಗೆಯು ಭ್ರಾಂತಿಪೂರ್ಣವೆಂದೂ, ಕೇವಲ ವಾಕ್ಚಾತುರ್ಯಯುಕ್ತವೆಂಬುದೂ ಅಸಾರವೆಂಬುದೂ ಸಹ ಸಹಜವಾಗಿಯೇ ತಿಳಿದು ಬರುವದರಲ್ಲಿ ಅಭ್ಯಂತರವಿರುವುದಿಲ್ಲ.

———